# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೧೫ (ಅಶ್ವಯುಜ ೨, ಶಕ ವರ್ಷ ೧೯೩೭)<br>Bengaluru, Thursday, September 24, 2015 (Aashwayuja 2, Shaka Varsha 1937) | ಸಂಚಿಕೆ ೩೯<br>Issue 39 |
|---|---|---|


# ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಾರಿಗೆ ಸಚಿವಾಲಯ

**ವಿಷಯ :** ಶ್ರೀ ಪಿ.ಒಡೆಯರ್, ಮೋ.ವಾ.ನಿ. (ಪ್ರಸ್ತುತ ನಿವೃತ್ತ) ಇವರಿಗೆ ಕ.ನಾ.ಸೇ. ನಿಯಮಾವಳಿಗಳ ನಿಯಮ 214 (1) (ಎ) ರಡಿ ದಂಡನೆ ವಿಧಿಸುವ ಬಗ್ಗೆ-ಆದೇಶ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಾರಿಇ 290 ಸಾಇಸೇ 2012, ದಿ: 09-01-2013
2. ಮಾನ್ಯ ಉಪಲೋಕಾಯುಕ್ತ-2 ಇವರ ಆಪ್ತ ಸಹಾಯಕರ ಪತ್ರ ಸಂಖ್ಯೆ: LOK/ARE-1/Enq-39/2013, dated: 09-01-2015.
3. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 30 ಸಿಎನ್‌ಎಸ್ 15, ದಿನಾಂಕ: 09-06-2015.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 09-01-2013ರ ಸರ್ಕಾರಿ ಆದೇಶದಲ್ಲಿ ಶ್ರೀ ಪಿ.ಒಡೆಯರ್, ಮೋಟಾರು ವಾಹನ ನಿರೀಕ್ಷಕ, ಸಾರಿಗೆ ಇಲಾಖೆ ಇವರ ವಿರುದ್ಧದ ಆರೋಪಗಳ ಬಗ್ಗೆ ವಿವರವಾದ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 14-ಎ ರನ್ವಯ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತಕ್ಕೆ ವಹಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 09-01-2015ರ ಪತ್ರದೊಂದಿಗೆ ಸ್ವೀಕರಿಸಲಾದ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸು ಹಾಗೂ ವಿಚಾರಣಾ ವರದಿ / ದಾಖಲೆಗಳ ಅನುಸಾರ ಶ್ರೀ ಪಿ.ಒಡೆಯರ್, ಮೋಟಾರು ವಾಹನ ನಿರೀಕ್ಷಕರು ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ವಿಚಾರಣಾಧಿಕಾರಿಗಳಾದ ಹೆಚ್ಚುವರಿ ರಿಜಿಸ್ಟ್ರಾರ್, ವಿಚಾರಣೆಗಳು-1, ಕರ್ನಾಟಕ ಲೋಕಾಯುಕ್ತ ಇವರು ನಡೆಸಿ ದಿನಾಂಕ: 06-12-2014 ರಂದು ವಿಚಾರಣಾ ವರದಿ ಸಲ್ಲಿಸಿದ್ದು, ಸದರಿ ಇಲಾಖಾ ವಿಚಾರಣೆಯಲ್ಲಿ ಶ್ರೀ ಪಿ.ಒಡೆಯರ್, ಮೋಟಾರು ವಾಹನ ನಿರೀಕ್ಷಕರು (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಆರೋಪಗಳು ಸಾಬೀತಾಗಿರುವ ಹಿನ್ನೆಲೆಯಲ್ಲಿ ಮಾನ್ಯ ಉಪ ಲೋಕಾಯುಕ್ತರು ಆರೋಪಿತರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 (1) (ಎ) ರಡಿ ನಿವೃತ್ತಿ ವೇತನದ ಶೇ. 5 ರಷ್ಟು ಭಾಗವನ್ನು ಐದು ವರ್ಷದವರೆಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಕರಣದಲ್ಲಿ ಸಲ್ಲಿಸಲಾದ ವಿಚಾರಣಾ ವರದಿ ಹಾಗೂ ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನ ಪ್ರತಿಯೊಂದಿಗೆ ಆರೋಪಿತರಾದ ಶ್ರೀ ಪಿ.ಒಡೆಯರ್, ಮೋಟಾರು ವಾಹನ ನಿರೀಕ್ಷಕರು (ಪ್ರಸ್ತುತ ನಿವೃತ್ತ) ಇವರಿಗೆ ದಿನಾಂಕ: 24-01-2015 ರಂದು ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು. ಆರೋಪಿತರು ಈ ಬಗ್ಗೆ ದಿನಾಂಕ: 10-02-2015 ರಂದು ಲಿಖಿತ ಹೇಳಿಕೆ ಸಲ್ಲಿಸಿ ತಮ್ಮ ವಿರುದ್ಧದ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಇಲಾಖಾ ವಿಚಾರಣೆಯಲ್ಲಿ ತಪ್ಪಿತಸ್ಥರೆಂದು ನಿರ್ಣಯಿಸಲಾಗಿರುವ ಶ್ರೀ ಪಿ.ಒಡೆಯರ್ ಇವರು ಸಲ್ಲಿಸಿರುವ ಲಿಖಿತ ಸಮಜಾಯಿಷಿ, ವಿಚಾರಣಾ ವರದಿ ಹಾಗೂ ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸು ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಇಲಾಖಾ ವಿಚಾರಣೆಯು ಸರ್ಕಾರಿ ನೌಕರರನ್ನು ತನ್ನ ಸೇವಾವಧಿಯಲ್ಲಿ ಎಸಗಿದರೆನ್ನಲಾದ ದುರ್ನಡತೆ ಅಥವಾ ಅಧಿಕಾರದ ದುರುಪಯೋಗ ಅಥವಾ ಕರ್ತವ್ಯ ಲೋಪದಂತಹ ವಿಷಯಗಳ ಬಗ್ಗೆ ಶೋಧನೆ ನಡೆಸುವಂತಹ ಪ್ರಕ್ರಿಯೆಯಾಗಿದ್ದು, ಕ್ರಿಮಿನಲ್ ವಿಚಾರಣೆಗಿಂತ ವಿಭಿನ್ನ ಹಾಗೂ ವಿಶಿಷ್ಟವಾಗಿರುತ್ತದೆ. ಇಲಾಖಾ ವಿಚಾರಣೆ ಅರೆ ನ್ಯಾಯಿಕ ಪ್ರಕ್ರಿಯೆಯಾಗಿದ್ದು, ಸಾಕ್ಷದ ಕುರಿತು ಅನುಸರಿಸುವ ಮಾನದಂಡ ಕ್ರಿಮಿನಲ್ ವಿಚಾರಣೆಗಿಂತ ಭಿನ್ನವಾಗಿರುತ್ತದೆ. ಮುಂದುವರೆದು ಇಲಾಖಾ ವಿಚಾರಣೆಯಲ್ಲಿ ರುಜುವಾತಿನ ಪ್ರಮಾಣ ಹಾಗೂ ಸಾಕ್ಷ್ಯದ / ಪುರಾವೆಯ ಗುಣಾವಗುಣಗಳ ವಿವೇಚನೆಯು "ಸಂಭವನೀಯತೆಯ ಅಧಿಕತೆ" (Preponderance of Possibilities)ಗೆ ಸೀಮಿತವಾಗಿದ್ದು, ಕ್ರಿಮಿನಲ್ ವಿಚಾರಣೆಯಲ್ಲಿದಂತೆ ಆರೋಪಗಳನ್ನು ಸಂಶಯಾತೀತವಾಗಿ (Beyond reasonable doubt) ರುಜುವಾತು ಪಡಿಸುವ ಕಠಿಣ ವಿಧಾನವನ್ನು ಅನುಸರಿಸುವ ಅವಶ್ಯಕತೆ ಇರುವುದಿಲ್ಲ.

ನಿಕಟಪೂರ್ವ ಕಂಡಿಕೆಯಲ್ಲಿ ಪ್ರಸ್ತಾಪಿಸಿರುವ ಇಲಾಖಾ ವಿಚಾರಣಾ ಕಾರ್ಯವಿಧಾನದಂತೆ ಪ್ರಸ್ತುತ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿರುವುದು ವಿಚಾರಣಾ ವರದಿಯ ಅವಲೋಕನೆಯಿಂದ ಕಂಡುಬರುತ್ತದೆ. ಲೋಕಾಯುಕ್ತ ಪೊಲೀಸರ ದಾಳಿಯ ವೇಳೆ ತಪ್ಪಿತಸ್ಥರಾಗಿರುವ ಶ್ರೀ ಪಿ.ಒಡೆಯರ್ ಇವರ ವಶದಲ್ಲಿದ್ದ ರೂ.115/–ಗಳನ್ನು Cash Declaration Register ನಲ್ಲಿ ದಾಖಲಿಸಲು ಹಾಗೂ ಸದರಿ ಹಣಕ್ಕೆ ಸಮರ್ಪಕ ಲೆಕ್ಕ ತೋರಿಸಲು ವಿಫಲರಾಗಿರುವುದು ವಿಚಾರಣೆಯಿಂದ ದೃಢಪಡುತ್ತದೆ. ಬಾಗೇಪಲ್ಲಿ ಆರ್.ಟಿ.ಓ ಚೆಕ್‌ಪೋಸ್ಟ್ ಮೇಲೆ ಲೋಕಾಯುಕ್ತ ಪೊಲೀಸರು ದಾಳಿ ನಡೆಸಿದ ಸಂದರ್ಭದಲ್ಲಿ ವಶಪಡಿಸಿಕೊಂಡ ರೂ. 1500/–ಗಳನ್ನು ಇಡಲಾಗಿದ್ದ ಕೊಠಡಿಗೆ ಪ್ರತ್ಯೇಕ ಹಾದಿ ಇರಲಿಲ್ಲವೆಂದು ಶಿಸ್ತು ಪ್ರಾಧಿಕಾರದ ಪರ ಒಂದನೇ ಸಾಕ್ಷಿಯಾದ ಚಿಕ್ಕಬಳ್ಳಾಪುರ ಲೋಕಾಯುಕ್ತ ಠಾಣೆಯ ಪೊಲೀಸ್ ನಿರೀಕ್ಷಕರು ನೀಡಿರುವ ಹೇಳಿಕೆ ಹಾಗೂ ಸದರಿ ಕೊಠಡಿಗೆ ಪ್ರತ್ಯೇಕ ಪ್ರವೇಶ ಹಾದಿಗಳು ಇದ್ದವು ಎಂದು ಶಿಸ್ತು ಪ್ರಾಧಿಕಾರ ಪರ 2ನೇ ಸಾಕ್ಷಿ ದಾಖಲಿಸಿರುವ ಹೇಳಿಕೆಗಳು ಪರಸ್ಪರ ವಿರೋಧಾಭಾಸದಿಂದ ಕೂಡಿದ್ದರೂ ಸಹ ಅನೈತಿಕವಾಗಿ ಸದರಿ ಹಣವನ್ನು ಶ್ರೀ ಪಿ.ಒಡೆಯರ್ ಇವರು ಪಡೆದಿರುವ ಸಂಭವನೀಯತೆಗಳು ಅಧಿಕವಾಗಿ ವಿಚಾರಣೆ ವೇಳೆಯಲ್ಲಿ ಕಂಡುಬಂದಿರುವುದು ದೃಢಪಡುತ್ತದೆ.

ಶ್ರೀ ಪಿ.ಒಡೆಯರ್ ಇವರು ಇಲಾಖಾ ವಿಚಾರಣೆಗಳ ಅರೆ ನ್ಯಾಯಿಕ ಸ್ವರೂಪವನ್ನು ಅರ್ಥೈಸಿಕೊಳ್ಳದೇ ಕ್ರಿಮಿನಲ್ ವಿಚಾರಣೆಗಳಲ್ಲಿ ಅನುಸರಿಸುವ ಮಾನದಂಡ ವಿಧಾನ ಹಾಗೂ ಪ್ರಕ್ರಿಯೆಗಳ ಬೆಳಕಿನಲ್ಲಿ ಅವರ ಲಿಖಿತ ವಿವರಣೆ ಸಲ್ಲಿಸಿರುವುದು ಕಂಡುಬರುತ್ತದೆ. ಸದರಿ ವಿವರಣೆಯಲ್ಲಿ ಅವರು ಪ್ರಸ್ತಾಪಿಸಿರುವ ಪ್ರತಿವಾದ / ಪ್ರತಿರಕ್ಷಣೆಗೆ ಸಮರ್ಪಕ ಆಧಾರಗಳನ್ನಾಗಲೀ ಹಾಗೂ ಸಮಂಜಸನೀಯ ದಾಖಲೆಗಳನ್ನಾಗಲೀ ಒದಗಿಸಿರುವುದಿಲ್ಲ. ಶ್ರೀ ಪಿ.ಒಡೆಯರ್ ಇವರು ಪ್ರಸ್ತಾಪಿಸಿರುವ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳು ಈ ಪ್ರಕರಣದಲ್ಲಿ ಯಾವುದೇ ಅನ್ವಯಿಕೆ ಹೊಂದಿರುವುದಿಲ್ಲ.

ವಿಚಾರಣೆ ವೇಳೆ ಬಾಗೇಪಲ್ಲಿ ತಪಾಸಣಾ ಕೇಂದ್ರದ ಪೂರ್ಣ ಜವಾಬ್ದಾರಿ ಹೊಂದಿರುವ ಬಗ್ಗೆ ಹಾಗೂ Cash Declaration Register ನಲ್ಲಿ ಅವರ ಬಳಿ ಇದ್ದ ಹಣದ ವಿವರಗಳನ್ನು ದಾಖಲಿಸದೇ ಇರುವ ಬಗ್ಗೆ ಶ್ರೀ ಪಿ.ಒಡೆಯರ್ ಇವರು ವಿಚಾರಣೆ ವೇಳೆ ಒಪ್ಪಿಕೊಂಡಿರುವುದು ಅವರ ದುರ್ನಡತೆಗೆ ಪೂರಕ ಆಧಾರವಾಗಿರುತ್ತದೆ. ಪ್ರಕರಣದಲ್ಲಿ ಲಭ್ಯವಿದ್ದ ದಾಖಲೆ ದಸ್ತಾವೇಜುಗಳು, ಸಾಕ್ಷಿಗಳು, ಉಭಯ ಪಕ್ಷಗಳ ಪರವಾಗಿ ನೀಡಲಾದ ಹೇಳಿಕೆಗಳು ಹಾಗೂ ಸಾಂದರ್ಭಿಕ ಪುರಾವೆಗಳನ್ನು ಅತ್ಯಂತ ನಿಖರವಾಗಿ ಮತ್ತು ಮೌಲ್ಯಯುತವಾಗಿ ಪರಿಗಣಿಸಿ / ವಿವೇಚಿಸಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿರುವುದು ದೃಢಪಟ್ಟ ಹಿನ್ನೆಲೆಯಲ್ಲಿ ವಿಚಾರಣಾ ವರದಿಯಲ್ಲಿನ ನಿರ್ಣಯಗಳ ಬಗ್ಗೆ ವಿಭಿನ್ನ ನಿಲುವು ತಳೆಯಲು ಸಾಧ್ಯವಾಗುವುದಿಲ್ಲವೆಂದು ಅಭಿಪ್ರಾಯಪಟ್ಟು ವಿಚಾರಣಾ ವರದಿಯನ್ನು ಮಾನ್ಯ ಉಪಲೋಕಾಯುಕ್ತರು ಅಂಗೀಕರಿಸಿರುವುದು ಹಾಗೂ ಆರೋಪಿತರು ಈಗಾಗಲೇ ಸೇವೆಯಿಂದ ನಿವೃತ್ತರಾಗಿರುವುದರಿಂದ ಇವರು ಎಸಗಿದ್ದ ದುರ್ನಡತೆ ರುಜುವಾತು ಮಟ್ಟಕ್ಕೆ ಅನುಗುಣವಾಗಿ ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 214 ರಡಿ ಇವರ ನಿವೃತ್ತಿ ವೇತನದ ಶೇ. 5ರಷ್ಟು ಭಾಗವನ್ನು 5 ವರ್ಷಗಳವರೆಗೆ ತಡೆಹಿಡಿಯುವ ದಂಡನೆ ವಿಧಿಸಲು ಶಿಫಾರಸ್ಸು ಮಾಡಿರುವುದು ನೈಸರ್ಗಿಕ ನ್ಯಾಯಕ್ಕೆ ಅನುಸಾರವಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಶ್ರೀ ಪಿ.ಒಡೆಯರ್ ಇವರ ಲಿಖಿತ ವಿವರಣೆ ಪರಿಗಣನಾರ್ಹವಾಗಿರದ ಕಾರಣ ಮಾನ್ಯ ಉಪಲೋಕಾಯುಕ್ತರು ಸಲ್ಲಿಸಿರುವ ವರದಿಯನ್ನು ಒಪ್ಪಿಕೊಂಡು ಸದರಿ ವರದಿಯಲ್ಲಿ ಶಿಫಾರಸ್ಸು ಮಾಡಿದಂತೆ ಶ್ರೀ ಪಿ.ಒಡೆಯರ್ ಇವರ ನಿವೃತ್ತಿ ವೇತನದ ಶೇ. 5ರಷ್ಟು ಭಾಗವನ್ನು 5 ವರ್ಷಗಳ ವರೆಗೆ ನಿಯಮ ಕ.ನಾ.ಸೇ.ನಿಯಮಗಳ ನಿಯಮ 214 ರಡಿ ತಡೆಹಿಡಿಯುವ ದಂಡನೆ ವಿಧಿಸಲು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಾರಿಇ 290 ಸಾಇಸೇ 2012, ಬೆಂಗಳೂರು ದಿನಾಂಕ: 22–06–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಪಿ.ಒಡೆಯರ್, ಮೋಟಾರು ವಾಹನ ನಿರೀಕ್ಷಕರು (ಪ್ರಸ್ತುತ ನಿವೃತ್ತ), ಸಾರಿಗೆ ಇಲಾಖೆ ಇವರ ನಿವೃತ್ತಿ ವೇತನದ ಶೇ.5 ರಷ್ಟು ಭಾಗವನ್ನು ಐದು ವರ್ಷದವರೆಗೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 214 (1) (ಎ) ರನ್ವಯ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕಾಸೇವಾ ಆಯೋಗವು ದಿನಾಂಕ: 09–06–2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಬೀರೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ

**P.R-412**

**S.C-50**

## ಆರ್ಥಿಕ ಸಚಿವಾಲಯ

**ವಿಷಯ** : ಹಿರಿಯ ವೇತನ ಶ್ರೇಣಿ – ಕೆಳ ಹುದ್ದೆಯ ವೇತನ ಶ್ರೇಣಿಯಲ್ಲಿ ಮುಂದುವರಿಯಲು ಅಭಿಮತ ನೀಡುವ ಕಾಲಮಿತಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ** :
1. ಸ.ಅ.ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 1991, ದಿನಾಂಕ: 29–10–1991.
2. ಸ.ಅ.ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 1991, ದಿನಾಂಕ: 04–01–1993.
3. ಸ.ಅ.ಸಂಖ್ಯೆ: ಎಫ್‌ಡಿ 28 ಎಸ್‌ಆರ್‌ಪಿ 1994, ದಿನಾಂಕ: 24–11–1994.
4. ಸ.ಅ.ಸಂಖ್ಯೆ: ಎಫ್‌ಡಿ 27 ಎಸ್‌ಆರ್‌ಪಿ 1999, ದಿನಾಂಕ: 30–07–1999.
5. ಸ.ಅ.ಸಂಖ್ಯೆ: ಎಫ್‌ಡಿ 16 ಎಸ್‌ಆರ್‌ಪಿ 2002(II), ದಿನಾಂಕ: 14–06–2002.
6. ಸ.ಅ.ಸಂಖ್ಯೆ: ಎಫ್‌ಡಿ 24 ಎಸ್‌ಆರ್‌ಪಿ 2013(II), ದಿನಾಂಕ: 14–11–2013.

**ಪ್ರಸ್ತಾವನೆ:**

ಕರ್ನಾಟಕ ನಾಗರಿಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳು, 1991 ರ ನಿಯಮ 3 ರ ಕೆಳಗೆ ಅಧಿಸೂಚನೆ ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 1991 ದಿನಾಂಕ: 04–01–1993ರಲ್ಲಿ ಸೇರ್ಪಡೆ ಮಾಡಿದ ಪರಂತುಕ (iii) ರ ಪ್ರಕಾರ, ಸರ್ಕಾರಿ ನೌಕರನು ದಿನಾಂಕ: 01–06–1991 ರಂದು ಅಥವಾ ನಂತರ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸುವ ಮುನ್ನ ಉನ್ನತ ಹುದ್ದೆಗೆ ಮುಂಬಡ್ತಿ ಹೊಂದಿದಲ್ಲಿ, ಹಿರಿಯ ವೇತನ ಶ್ರೇಣಿಗೆ ಅರ್ಹತೆ ಪಡೆಯುವವರೆಗೆ, ಕೆಳ ಹುದ್ದೆಯ ವೇತನ ಶ್ರೇಣಿ ಅಥವಾ ಆಯ್ಕೆ ಕಾಲಿಕ ವೇತನ ಶ್ರೇಣಿಯಲ್ಲಾಗಲೀ, ಮುಂದುವರೆಯಲು ಇಚ್ಛಿಸಿದಲ್ಲಿ, ಆ ನೌಕರನು ತಾನು ಮುಂಬಡ್ತಿ ಹೊಂದಿದ ದಿನಾಂಕದಿಂದ ಅಥವಾ ಕರ್ನಾಟಕ ನಾಗರಿಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂ ಚಾಲಿತ ವಿಶೇಷ ಮುಂಬಡ್ತಿ) (ತಿದ್ದುಪಡಿ) ನಿಯಮಗಳು, 1993 ಪ್ರಾರಂಭವಾದ ದಿನಾಂಕದಿಂದ, ಈ ಎರಡರಲ್ಲಿ ಯಾವುದು ನಂತರವೋ ಅಲ್ಲಿಂದ ಎರಡು ತಿಂಗಳ ಅವಧಿಯೊಳಗಾಗಿ ತನ್ನ ಅಭಿಮತವನ್ನು ಬರವಣಿಗೆಯಲ್ಲಿ ನೇಮಕಾತಿ ಪ್ರಾಧಿಕಾರಿಗಳಿಗೆ ಸಲ್ಲಿಸತಕ್ಕದೆಂದು ಆದೇಶಿಸಲಾಗಿತ್ತು.

ಮೇಲೆ ಉಲ್ಲೇಖ (3) ರಿಂದ (6) ರವರೆಗೆ ಓದಲಾದ ಸರ್ಕಾರಿ ಆದೇಶಗಳಲ್ಲಿ ಹಿರಿಯ ವೇತನ ಶ್ರೇಣಿಗೆ ಅಭಿಮತ ಸಲ್ಲಿಸಲು ನಿಗದಿಪಡಿಸಿರುವ ಕಾಲಮಿತಿಯನ್ನು ಕಾಲಕಾಲಕ್ಕೆ ದಿನಾಂಕ: 31–12–2013 ರವರೆಗೆ ವಿಸ್ತರಿಸಲಾಗಿತ್ತು. ಹಲವು ಇಲಾಖೆಗಳು ಈ ಕಾಲಾವಧಿಯನ್ನು ಮತ್ತೊಮ್ಮೆ ವಿಸ್ತರಿಸುವಂತೆ ಪ್ರಸ್ತಾಪಿಸಿದ್ದು, ಸರ್ಕಾರವು ಇದನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 13 ಎಸ್‌ಆರ್‌ಪಿ 2015((II), ಬೆಂಗಳೂರು, ದಿನಾಂಕ: 20ನೇ ಜೂನ್ 2015**

ದಿನಾಂಕ: 01–06–1991 ರಂದು ಅಥವಾ ತದನಂತರದಲ್ಲಿ ಉನ್ನತ ಹುದ್ದೆಗಳಿಗೆ ಪದೋನ್ನತಿ ಹೊಂದಿರುವ ಸರ್ಕಾರಿ ನೌಕರರು ಹಿರಿಯ ವೇತನ ಶ್ರೇಣಿಯ ಸೌಲಭ್ಯವನ್ನು ಪಡೆಯಲು ಅಭಿಮತ ನೀಡಲು ನಿಗದಿಪಡಿಸಲಾದ ಕಾಲಾವಧಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳವರೆಗೆ ಮತ್ತೆ ವಿಸ್ತರಿಸಲು ಸರ್ಕಾರವು ಹರ್ಷಿಸುತ್ತದೆ.

ಇಲಾಖಾ ಮುಖ್ಯಸ್ಥರುಗಳು ಈ ಆದೇಶವನ್ನು ಸಂಬಂಧಪಟ್ಟ ಎಲ್ಲಾ ನೌಕರರ ಗಮನಕ್ಕೆ ತರುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್.ರಾಜಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ. (ಸೇವೆಗಳು–2)

**P.R-413**

**S.C-100**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀಮತಿ ಎಂ.ಎಲ್.ಶೈಲಜ, ಕಾನೂನು ಅಧಿಕಾರಿ (ಕಿ), ಪೊಲೀಸ್ ಆಯುಕ್ತರವರ ಕಛೇರಿ, ಬೆಂಗಳೂರು ಇವರ ವಿರುದ್ಧ ದಾಖಲಾದ ಲಂಚ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :** ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್: ಐಎನ್‌ವಿ(ಜಿ)/ಸಿಟಿ/ಕ್ರೈಂ.46/2014, ದಿನಾಂಕ: 25–05–2015.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಪೊಲೀಸ್ ನಿರೀಕ್ಷಕರ ತನಿಖಾ ಅಂತಿಮ ವರದಿಯ ದಾಖಲೆಗಳನ್ನು ಸರ್ಕಾರಕ್ಕೆ ಕಳುಹಿಸುತ್ತಾ, ಶ್ರೀಮತಿ ಎಂ.ಎಲ್.ಶೈಲಜ, ಕಾನೂನು ಅಧಿಕಾರಿ (ಕಿ), ಪೊಲೀಸ್ ಆಯುಕ್ತರವರ ಕಛೇರಿ, ಬೆಂಗಳೂರು ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆ, ಬೆಂಗಳೂರು ಇಲ್ಲಿ ದಾಖಲಿಸಿರುವ ಮೊ.ಸಂ:46/2014ರ ಕಲಂ 7,13(1)(ಡಿ) ಜೊತೆಗೆ 13(2) ಲಂಚ ನಿರೋಧ ಕಾಯ್ದೆ, 1988 ರಡಿ ಸದರಿ ಆಪಾದಿತ ಅಧಿಕಾರಿಯವರು ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸದರಿ ಅಧಿಕಾರಿಯನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧ ಕಾಯ್ದೆ–1988 ರ ಕಲಂ 19(1) ರ ಅಡಿಯಲ್ಲಿ ಸರ್ಕಾರದ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು, ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. **ಫಿರ್ಯಾದಿಯ ಹೆಸರು ಮತ್ತು ವಿಳಾಸ:** ಶ್ರೀ ಮಹೇಶ್.ಕೆ.ಬಿನ್ ಲೇಟ್ ಕಂದಸ್ವಾಮಿ, ವಯಸ್ಸು 60ವರ್ಷ, ನಂ.63, ಮೈಕೆಲ ಪಾಳ್ಯ, 2ನೇ ಹಂತ, 1ನೇ ಮೈನ್, 1ನೇ ಕ್ರಾಸ್, ನ್ಯೂತಿಪ್ಪಸಂದ್ರ ಪೋಸ್ಟ್, ಬೆಂಗಳೂರು–75.
2. **ಪ್ರಥಮ ವರ್ತಮಾನ ವರದಿ:** ಬೆಂಗಳೂರು ಲೋಕಾಯುಕ್ತ ಪೊಲೀಸ್ ಠಾಣಾ ಮೊ.ಸಂ: 46/2014. ಕಲಂ 7,8,13(1)(ಡಿ) ಜೊತೆಗೆ 13(2) ಲಂಚ ನಿರೋಧ ಕಾಯ್ದೆ 1988, ದಿನಾಂಕ: 16–09–2014.
3. **ಪ್ರಾಯೋಗಿಕ ಪಂಚನಾಮೆ, ದಿನಾಂಕ:** 16–09–2014.
4. **ಟ್ರಾಪ್‌ನ ಮಹಜರ್ ದಿನಾಂಕ:** 16–09–2014.
5. **ಆಪಾದಿತ ಧ್ವನಿ ಗುರುತಿಸುವ ಪಂಚನಾಮೆ ದಿನಾಂಕ:** 20–10–2014.
6. **ವಿಧಿವಿಜ್ಞಾನ ಪ್ರಯೋಗಾಲಯಕ್ಕೆ ಆರ್ಟಿಕಲ್‌ಗಳನ್ನು ನೀಡಿರುವ ವರದಿ ಸಂಖ್ಯೆ:** FSL/(Ba)/4905/2014, DATED: 25-10-2014.
7. **ರಾಸಾಯನಿಕ ಪರೀಕ್ಷಾ ವರದಿ ಸಂಖ್ಯೆ:** ಸಾ.ಆ.ಸಂ./ರಾ.ಪ/ಲೋಕ್/ 61/14–15, ದಿನಾಂಕ: 26–09–2014.
8. **ಕೃತ್ಯ ನಡೆದ ಸ್ಥಳದ ನಕಾಶೆ:** ಸಹಾಯಕ ಕಾರ್ಯಪಾಲಕ ಇಂಜಿನಿಯರ್, ನಂ.1, ಕಟ್ಟಡಗಳ ಉಪ ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಕಾಅ/ಕಉವಿ–1/ಕೃನಸ್ಥನಕ್ಷೆ/2014–15/713–14, ದಿನಾಂಕ: 01–12–2014.
9. **ಸ್ವತ್ತಿನ ಮಾಲು ಪಟ್ಟಿ ಸಂಖ್ಯೆ:** 98/2014, ದಿನಾಂಕ: 20–10–2014.
10. **ಸಾಕ್ಷಿಗಳ ಹೇಳಿಕೆಗಳು:**

   1. ಫಿರ್ಯಾದುದಾರರಾದ ಮಹೇಶ್.ಕೆ.ಬಿನ್ ಲೇಟ್ ಕಂದಸ್ವಾಮಿ, ವಯಸ್ಸು 60 ವರ್ಷ, ನಂ.63, ಮೈಕಲ ಪಾಳ್ಯ, 2ನೇ ಹಂತ, 1ನೇ ಮೈನ್, 1ನೇ ಕ್ರಾಸ್, ನ್ಯೂತಿಪ್ಪಸಂದ್ರ ಪೋಸ್ಟ್, ಬೆಂಗಳೂರು–75 ಹೇಳಿಕೆ ದಿನಾಂಕ: 16–09–2014 ಮತ್ತು ಮರು ಹೇಳಿಕೆ ದಿನಾಂಕ: 20–09–2014.
   2. ಶ್ರೀಮತಿ ಕವಿತಾ ಮಹೇಶ್ ಕೋಂ ಮಹೇಶ್ 51 ವರ್ಷ, ನಂ.63, ಮೈಕೆಲ ಪಾಳ್ಯ, 2ನೇ ಹಂತ, 1ನೇ ಮೈನ್, 1ನೇ ಕ್ರಾಸ್, ನ್ಯೂತಿಪ್ಪಸಂದ್ರ ಪೋಸ್ಟ್, ಬೆಂಗಳೂರು–75 ಇವರ ಹೇಳಿಕೆ ದಿನಾಂಕ: 16–09–2014.

3. ಶ್ರೀ ಮಹೇಶ್ ಬಿನ್ ಲೇಟ್ ಮುನಿಯಪ್ಪ, 25 ವರ್ಷ, ಎಫ್.ಡಿ.ಎ., ಕಂದಾಯ ಇಲಾಖೆ, ವಿಶೇಷ ಕೋಶ, ಬಹುಮಹಡಿಗಳ ಕಟ್ಟಡ, ಬೆಂಗಳೂರು ವಾಸ 1ನೇ ಕ್ರಾಸ್, ಕನಕವಿನಾಯಕ ದೇವಸ್ಥಾನದ ಮುಂಭಾಗ, ಶಾಂತಿ ಬಡಾವಣೆ, ರಾಮಮೂರ್ತಿನಗರ, ಬೆಂಗಳೂರು–16 ಇವರ ಹೇಳಿಕೆ ದಿನಾಂಕ: 16–09–2014 ಮತ್ತು 12–11–2014.
4. ಶ್ರೀಮತಿ ಫಾತಿಮಾ ಕೋ ಅಬ್ದುಲ್ ಅಹ್ಮದ್, 37 ವರ್ಷ, ಎಫ್.ಡಿ.ಎ., ಕಂದಾಯ ಇಲಾಖೆ, ಭೂಸ್ವಾಧೀನ–2, ಬಹುಮಹಡಿಗಳ ಕಟ್ಟಡ, ಬೆಂಗಳೂರು ವಾಸ ನಂ.8, ಜೆ.ಸಿ.ನಗರ, ಎಂ.ಆರ್.ಪಾಳ್ಯ, ರೀಡಿಂಗ್ ರೂಂ ಸ್ಟ್ರೀಟ್, ಬೆಂಗಳೂರು ರವರ ಹೇಳಿಕೆ ದಿನಾಂಕ: 16–09–2014 ಮತ್ತು 20–10–2014.
5. ಶ್ರೀ ವಾರದ ಮಲಕಪ್ಪ ಬಿನ್ ನಾಗಣ್ಣವಾರದ, 54 ವರ್ಷ, ಕಾನೂನು ಅಧಿಕಾರಿ (ಕಿರಿಯ) ಪೊಲೀಸ್ ಆಯುಕ್ತರವರ ಕಛೇರಿ ಆವರಣ, ಬೆಂಗಳೂರು ರವರ ಹೇಳಿಕೆ ದಿನಾಂಕ: 20–09–2014.
6. ಶ್ರೀ ಎನ್. ರಾಜಶೇಖರಯ್ಯ ಬಿನ್ ನಂದೀಶ್ವರಯ್ಯ, 57 ವರ್ಷ, ಇಂದಿರಾನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ಹೇಳಿಕೆ ದಿನಾಂಕ: 18–09–2014.
7. ಶ್ರೀ ಮಂಜುನಾಥ ಶೆಟ್ಟಿ ಬಿನ್ ಲೇಟ್ ರಂಗಯ್ಯ, 55 ವರ್ಷ, ಇಂದಿರಾನಗರ ಪೊಲೀಸ್ ಠಾಣೆ (ಕಾ & ಸು) ಬೆಂಗಳೂರು ನಗರ ರವರ ಹೇಳಿಕೆ ದಿನಾಂಕ: 18–09–2014.
8. ಶ್ರೀಮತಿ ಉಷಾ, ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ, ಬೆಂಗಳೂರು ರವರ ಹೇಳಿಕೆ ದಿನಾಂಕ: 16–09–2014.
9. ಶ್ರೀ ರವೀಂದ್ರ ಪಿ., ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ, ಬೆಂಗಳೂರು ರವರ ಹೇಳಿಕೆ ದಿನಾಂಕ: 16–09–2014 ಮತ್ತು ಮುಂದುವರೆದ ಹೇಳಿಕೆ ದಿನಾಂಕ: 26–10–2014.
10. ಶ್ರೀ ರಘು, ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ, ಬೆಂಗಳೂರು ರವರ ಹೇಳಿಕೆ ದಿನಾಂಕ: 16–09–2014.
11. ಶ್ರೀಮತಿ ಮಮತಾ, ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್, ಕರ್ನಾಟಕ ಲೋಕಾಯುಕ್ತ, ನಗರ ವಿಭಾಗ, ಬೆಂಗಳೂರು ರವರ ಹೇಳಿಕೆ ದಿನಾಂಕ: 16–09–2014.

**11.ಲಂಚ ಕೇಳಲು ಆಧಾರವಾದ ದಾಖಲೆಗಳು :**

ಫಿರ್ಯಾದುದಾರರ ಮಗಳಾದ ಸಂಧ್ಯಾರವರು ಇಂದಿರಾನಗರ ಪೊಲೀಸ್ ಠಾಣೆಯಲ್ಲಿ ನೀಡಿದ್ದ ದೂರಿನ ಸಂಬಂಧ ಲೀಗಲ್ ಓಪಿನಿಯನ್ ಪಡೆಯಲು ರೂ.50.000/–ಗಳ ಲಂಚದ ಹಣ ಬೇಡಿಕೆ ಇಟ್ಟಿರುವ ಕುರಿತು ಸಂಭಾಷಣೆಯ ಮೊಬೈಲ್ ರೆಕಾರ್ಡ್‌ನ ಪ್ರತಿಲೇಖದ ಪ್ರತಿ.

**12. ಆಪಾದಿತರ ಸಮಜಾಯಿಷಿ ಹೇಳಿಕೆ:**

ಶ್ರೀಮತಿ ಎಂ.ಎಲ್.ಶೈಲಜ, ಕಾನೂನು ಅಧಿಕಾರಿ (ಕಿ), ಪೊಲೀಸ್ ಆಯುಕ್ತರವರ ಕಛೇರಿ, ಬೆಂಗಳೂರು ಇವರ ಲಿಖಿತ ಹೇಳಿಕೆ ದಿನಾಂಕ: 16–09–2014

**ಪ್ರಕರಣದ ಸಾರಾಂಶ:** ಫಿರ್ಯಾದುದಾರರಿಗೆ ಆರೋಪಿ–1 ರವರು ದಿ: 11–09–2014 ರಂದು ಮಧ್ಯಾಹ್ನ 1.05 ಗಂಟೆಗೆ ಮೊಬೈಲ್ ನಂ.9538379268 ರಿಂದ ಫಿರ್ಯಾದಿಯ ಮೊಬೈಲ್‌ಗೆ ಕರೆ ಮಾಡಿ, ಆರೋಪಿ–1 ರವರು ತಮ್ಮ ಪರಿಚಯ ತಿಳಿಸಿ, ಕಮೀಷನರ್ ಆಫೀಸ್‌ಗೆ ಬರುವಂತೆ ತಿಳಿಸಿದ್ದು, ಅದರಂತೆ, 3.00 ಗಂಟೆಗೆ ಫಿರ್ಯಾದಿ ಮತ್ತು ಅವರ ಶ್ರೀಮತಿಯವರು ಭೇಟಿ ಮಾಡಲಾಗಿ, ಆರೋಪಿ–1 ಮತ್ತು ಆರೋಪಿ–2 ರವರು ಫಿರ್ಯಾದಿಯೊಂದಿಗೆ ಮಾತನಾಡಿದ್ದು, ನಂತರ ಆರೋಪಿ–2 ರವರು ಸದರಿ ಪ್ರಕರಣದಲ್ಲಿ ಅಭಿಪ್ರಾಯವನ್ನು ನೀಡಲು ರೂ.50,000/– ಲಂಚದ ಹಣಕ್ಕಾಗಿ ಒತ್ತಾಯ ಮಾಡಿದ್ದಾಗಿರುತ್ತದೆ. ಕೊನೆಯದಾಗಿ ರೂ.30,000/– ಗಳನ್ನು ನೀಡಲು ಒತ್ತಾಯಿಸಿದ್ದಾಗಿರುತ್ತದೆ. ಫಿರ್ಯಾದಿಗೆ ಲಂಚದ ಹಣವನ್ನು ನೀಡಲು ಇಷ್ಟವಿಲ್ಲದ ಕಾರಣ ಸದರಿ ಅಸಿಸ್ಟೆಂಟ್‌ರವರಿಗೆ ರೂ.2500/– ಗಳ ಮುಂಗಡ ಹಣವನ್ನು ನೀಡಿ ಲೀಗಲ್ ಒಪಿನಿಯನ್ ನೀಡಲು ಕೋರಿರುತ್ತಾರೆ.

ದಿ: 12–09–2014 ರಂದು ಮಧ್ಯಾಹ್ನ 3.00 ಗಂಟೆಗೆ ಫಿರ್ಯಾದಿ ಹೋಗಿ ಭೇಟಿ ಮಾಡಲಾಗಿ, ಶ್ರೀಮತಿ ಶೈಲಜ, ಎಡಿಪಿ ರವರು ಕಛೇರಿಯಲ್ಲಿದ್ದು ಅವರ ಅಸಿಸ್ಟೆಂಟ್ ಕಛೇರಿಯಲ್ಲಿ ಇಲ್ಲದೇ ಇದ್ದು, ಅವರೊಂದಿಗೆ ಫಿರ್ಯಾದಿ ತನ್ನ ಮಗಳ ಪ್ರಕರಣದ ಬಗ್ಗೆ ಮಾತನಾಡುತ್ತಾ ದಿ: 11–09–2014 ರಂದು ತಮ್ಮ ಅಸಿಸ್ಟೆಂಟ್ ರೂ.50,000/–ಗಳಿಗೆ ಒತ್ತಾಯಿಸಿರುವ ಬಗ್ಗೆ ತಿಳಿಸಿದ್ದು, ಅಂತಿಮವಾಗಿ ರೂ.25,000/–ಗಳನ್ನು ನೀಡುವಂತೆ ಆರೋಪಿ–1 ರವರು ಒತ್ತಾಯಿಸಿದ್ದಾಗಿದ್ದು, ಅದನ್ನು ಅವರ ಮೊಬೈಲ್‌ನಲ್ಲಿ ರೆಕಾರ್ಡ್ ಮಾಡಿಕೊಂಡಿರುತ್ತಾರೆ.

ದಿ: 16–09–2014 ರಂದು ಫಿರ್ಯಾದುದಾರರಾದ ಶ್ರೀ ಮಹೇಶ್ ಎಂಬುವವರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗದ ಕಛೇರಿಗೆ ಹಾಜರಾಗಿ ಕೊಟ್ಟ ದೂರಿನ ಮೇರೆಗೆ ಕರ್ನಾಟಕ ಲೋಕಾಯುಕ್ತ ಮೊಕದ್ದಮೆ ಸಂ. 46/2014 ರಲ್ಲಿ ಕಲಂ 7 ಲಂಚ ನಿರೋಧ ಕಾಯ್ದೆ 1988ರ ಪ್ರಕಾರ ಕೇಸು ದಾಖಲು ಮಾಡಿಕೊಂಡು ದಿ: 16–09–2014 ರಂದು ತನಿಖಾಧಿಕಾರಿಯವರು ಕ್ರಮ ಕೈಗೊಂಡಿರುತ್ತಾರೆ.

ತನಿಖಾಧಿಕಾರಿಗಳು ದಿ: 16–09–2014 ರಂದು ಟ್ರ್ಯಾಪ್ ಕಾರ್ಯಾಚರಣೆಗಾಗಿ ಲೋಕಾಯುಕ್ತ ಕಛೇರಿಯಿಂದ ಸರ್ಕಾರಿ ವಾಹನ ಸಂ. ಕೆಎ–01 ಜಿ–4740 ರಲ್ಲಿ ಮಧ್ಯಾಹ್ನ 2.30 ಗಂಟೆಗೆ ಒಟ್ಟು 9 ಜನ ತೆರಳಿದ್ದು ಆರೋಪಿ ಶ್ರೀಮತಿ ಎಂ.ಎಲ್. ಶೈಲಜಾ ರವರನ್ನು ಭೇಟಿ ಮಾಡಲು ಅವರ ಕಛೇರಿಗೆ ಹೋದಾಗ ಕಛೇರಿಯಲ್ಲಿ ಶ್ರೀಮತಿ ಎಂ.ಎಲ್.ಶೈಲಜಾ ರವರು ಇಲ್ಲದೇ ಇದ್ದು, ಭೈರಪ್ಪ ರವರು ಡಿಡಿ ಕಛೇರಿಗೆ ಹೋಗಿರುವ ಬಗ್ಗೆ ತಿಳಿಸಿ, ಕಾಯುವಂತೆ ಹೇಳಿದ ಮೇರೆಗೆ ಫಿರ್ಯಾದಿ ಕಾಯುತ್ತಿದ್ದು, ಸುಮಾರು 4 ಗಂಟೆಯ ಸಮಯಕ್ಕೆ ಆರೋಪಿತರು ಬಂದಿದ್ದು, ಫಿರ್ಯಾದಿಯನ್ನು ಪಕ್ಕದ ಕೊಠಡಿಗೆ ಕರೆದುಕೊಂಡು ಹೋಗಿ ಫಿರ್ಯಾದಿಯಿಂದ ಲಂಚದ ಹಣವನ್ನು ಅವರ ಅಧೀನ ಅಧಿಕಾರಿ ಭೈರಪ್ಪರವರಿಗೆ ನೀಡುವಂತೆ ತಿಳಿಸಿದ ಮೇರೆಗೆ ಫಿರ್ಯಾದಿ ನೀಡಿದ್ದಾಗಿರುತ್ತದೆ. ಸದರಿ ಲಂಚದ ಹಣವನ್ನು ಆರೋಪಿ–2 ರವರು ಪಡೆದು ತನ್ನ ಕೈಯಲ್ಲಿ ಇರಿಸಿಕೊಳ್ಳುವುದರ ಮೂಲಕ ಲಂಚದ ಹಣವನ್ನು ಪಡೆದಿರುತ್ತಾರೆ.

ಆರೋಪಿ–1 ರವರು ಫಿರ್ಯಾದಿಯಿಂದ ಲಂಚದ ಹಣವನ್ನು ತನ್ನ ಅಧೀನ ಅಧಿಕಾರಿ ಆರೋಪಿ–2 ಭೈರಪ್ಪರವರಿಗೆ ಸೂಚಿಸಿ ಫಿರ್ಯಾದಿಯಿಂದ ಪಡೆದಿದ್ದು ನಂತರದಲ್ಲಿ ಫಿರ್ಯಾದಿಯು ಸದರಿ ಕಛೇರಿಯಿಂದ ಟ್ರ್ಯಾಪ್ ತಂಡಕ್ಕೆ ಸಂಜ್ಞೆ ನೀಡಲು ಬರುವಷ್ಟರಲ್ಲಿ ಆರೋಪಿ–1 ರವರು ಆರೋಪಿ–2 ರವರಿಗೆ

ರೂ.2,000/–ಗಳನ್ನು ನೀಡಿದ್ದು, ಇನ್ನುಳಿದ ರೂ.23,000/–ಗಳನ್ನು ತನ್ನ ಕೈಯಲ್ಲಿ ಇಟ್ಟುಕೊಂಡಿದ್ದು, ಟ್ರ್ಯಾಪ್ ತಂಡ ಕೊಠಡಿಗೆ ಹೋದ ಕೂಡಲೇ ಆರೋಪಿ–1 ರವರು ತಾನು ಕುಳಿತು ಕೆಲಸ ಮಾಡುವ ಟೇಬಲ್ ಕೆಳಗೆ ಬಿಸಾಡಿದ್ದು, ಸದರಿ ಹಣವನ್ನು ಮತ್ತು ಆರೋಪಿ–2 ಭೈರಪ್ಪ ರವರು ತನ್ನ ಶರ್ಟಿನ ಜೇಬಿನಲ್ಲಿ ಇರಿಸಿಕೊಂಡಿದ್ದು ರೂ.2,000/– ಅನ್ನು ಪಂಚರ ಸಮಕ್ಷಮ ವಶಪಡಿಸಿಕೊಂಡಿರುತ್ತೆ.

ಆರೋಪಿ–2 ಶ್ರೀ ಭೈರಪ್ಪ ರವರು ಫಿರ್ಯಾದಿಯಿಂದ ತಮ್ಮ ಎರಡು ಕೈಗಳಿಂದ ಲಂಚದ ಹಣವನ್ನು ಪಡೆದು ಜೇಬಿನಲ್ಲಿ ಇಟ್ಟುಕೊಂಡಿದ್ದರಿಂದ ಬಲಗೈ ಮತ್ತು ಎಡಗೈ ಬೆರಳುಗಳನ್ನು ಪ್ರತ್ಯೇಕವಾಗಿ ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿ ತೊಳೆದಾಗ ಬಣ್ಣ ರಹಿತವಾದ ದ್ರಾವಣವು ಗುಲಾಬಿ ಬಣ್ಣಕ್ಕೆ ತಿರುಗಿರುತ್ತದೆ. ಅಲ್ಲದೇ ಆರೋಪಿ–1 ರವರು ಆರೋಪಿ–2 ರವರಿಂದ ಲಂಚದ ಹಣವನ್ನು ಪಡೆದು ತನ್ನ ಕೈಯಲ್ಲಿರಿಸಿಕೊಂಡಿದ್ದು ಸದರಿಯವರ ಕೈಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಿಂದ ತೊಳೆದಾಗ ಬಣ್ಣ ರಹಿತವಾದ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ತಿರುಗುವುದರ ಮೂಲಕ ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿರುತ್ತದೆ. ಅಲ್ಲದೆ ಫಿನಾಪ್ತಲಿನ್ ಅಂಶವಿರುವ ಬಗ್ಗೆ ದೃಡಪಡಿಸಿಕೊಳ್ಳಲು ರಾಸಾಯನಿಕ ಪರೀಕ್ಷೆಗಾಗಿ ರಾಸಾಯನಿಕ ತಜ್ಞರಿಗೆ ಕಳುಹಿಸಲಾಗಿ, ಸದರಿಯವರು ದೃಢೀಕೃತ ವರದಿಯನ್ನು ನೀಡಿರುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ. 7, 13(1) (ಡಿ) ಸಹವಾಚನ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದು ಹಾಕುವ ಅಧಿಕಾರವುಳ್ಳದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ 1988ರ ಕಲಂ 19 (1)ರಡಿ ಆಪಾದಿತ ಅಧಿಕಾರಿ ಶ್ರೀಮತಿ ಎಂ.ಎಲ್.ಶೈಲಜ, ಕಾನೂನು ಅಧಿಕಾರಿ (ಕಿ), ಪೊಲೀಸ್ ಆಯುಕ್ತರವರ ಕಛೇರಿ, ಬೆಂಗಳೂರು ಇವರನ್ನು ಕಲಂ. 7, 13(1) (ಡಿ) ಜೊತೆಗೆ 13(2)ರ ಅಡಿಯಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 384 ಪಿಪಿಇ 2014, ಬೆಂಗಳೂರು, ದಿನಾಂಕ: 20ನೇ ಜೂನ್ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆರೋಪಿಯಾದ ಶ್ರೀಮತಿ ಎಂ.ಎಲ್.ಶೈಲಜ, ಕಾನೂನು ಅಧಿಕಾರಿ (ಕಿ), ಪೊಲೀಸ್ ಆಯುಕ್ತರವರ ಕಛೇರಿ, ಬೆಂಗಳೂರು ಇವರನ್ನು ಹುದ್ದೆಯಿಂದ ತೆಗೆದು ಹಾಕುವ/ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಇವರನ್ನು ಲಂಚ ನಿರೋಧಕ ಕಾಯ್ದೆ–1988 ಕಲಂ 7, 13(1)(ಡಿ) ಸಹವಾಚನ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಬೆಂಗಳೂರು ಲೋಕಾಯುಕ್ತ ಪೊಲೀಸ್ ಠಾಣಾ ಮೊ.ನಂ: 46/2014 ರ ಘಟನೆಗೆ ಸಂಬಂಧಿಸಿದಂತೆ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸದರಿ ಕಾಯ್ದೆಯ ಕಲಂ 19(1) ರನ್ವಯ ಮಂಜೂರಾತಿ ನೀಡಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣಾ) ನಿಯಮಾವಳಿಗಳು 1977ರ ನಿಯಮ 19 (1) ರ ಅನುಸಾರ ಈ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ದಿನಾಂಕ: /06/2015 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R-414**

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು–ಬಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀಮತಿ ಸುಧಾಸ್ವಾಮಿ, ಚೀಫ್ ಸೈಂಟಿಫಿಕ್ ಆಫೀಸರ್, ಶ್ರೀ ಪಿ. ಮೊಹಮ್ಮದ್ ಸೈಫುದ್ದೀನ್ ರುಬ್ಬಾನಿ ಸೈಂಟಿಫಿಕ್ ಆಫೀಸರ್ ಹಾಗೂ ಶ್ರೀ ಗಿರೀಶ್ ಎಂ.ಕೆ. ಜ್ಯೂನಿಯರ್ ಸೈಂಟಿಫಿಕ್ ಆಫೀಸರ್ ಔಷಧ ಪರೀಕ್ಷಾ ಪ್ರಯೋಗಾಲಯ ಬೆಂಗಳೂರು, ಇವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಮರುಸ್ಥಾಪಿಸುವ ಬಗ್ಗೆ.

**ಓದಲಾಗಿದೆ :**

1. ಪತ್ರ ಸಂಖ್ಯೆ : Compt/UPLOK-2/Misc-735/2014, dated : 13-08-2014.
2. ಔಷಧ ನಿಯಂತ್ರಕರ ಪತ್ರ ಸಂಖ್ಯೆ : ಔನಿಇ/22/ಡಿಸಿಪಿ 2014–15, ದಿನಾಂಕ : 08–09–2014.
3. ಸರ್ಕಾರದ ಆದೇಶ ಸಂಖ್ಯೆ : ಆಕುಕ 181 ಐಎಂಎಂ 2014, ದಿನಾಂಕ : 30–09–2014.
4. ಸರ್ಕಾರದ ಆದೇಶ ಸಂಖ್ಯೆ : ಆಕುಕ 181 ಐಎಂಎಂ 2014, ದಿನಾಂಕ : 09–10–2014 ಮತ್ತು 17–11–2014.
5. ಪತ್ರ ಸಂಖ್ಯೆ : Compt/UPLOK/BCD/1365/2015, dated : 20-04-2015.
6. ಔಷಧ ನಿಯಂತ್ರಕರ ಪತ್ರ ಸಂಖ್ಯೆ : ಔನಿಇ/595/ಸಿಬ್ಬಂದಿ/2014–15, ದಿನಾಂಕ : 23–04–2015.

**ಪ್ರಸ್ತಾವನೆ :**

ಮಾನ್ಯ ಉಪ ಲೋಕಾಯುಕ್ತ ಕರ್ನಾಟಕ ಬೆಂಗಳೂರುರವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಶ್ರೀಮತಿ ಸುಧಾಸ್ವಾಮಿ ಚೀಫ್ ಸೈಂಟಿಫಿಕ್ ಆಫೀಸರ್, ಶ್ರೀ ಮೊಹಮ್ಮದ್ ಸೈಫುದ್ದೀನ್ ರುಬ್ಬಾನಿ ಸೈಂಟಿಫಿಕ್ ಆಫೀಸರ್ ಹಾಗೂ ಶ್ರೀ ಗಿರೀಶ್ ಎಂ.ಕೆ. ಜ್ಯೂನಿಯರ್ ಸೈಂಟಿಫಿಕ್ ಆಫೀಸರ್ ಔಷಧ ಪರೀಕ್ಷಾ ಪ್ರಯೋಗಾಲಯ ಬೆಂಗಳೂರು ಇವರುಗಳು ಕರ್ತವ್ಯ ಲೋಪ ಎಸಗಿರುವ ಹಿನ್ನೆಲೆಯಲ್ಲಿ ನಿಯಮಾನುಸಾರ ಕ್ರಮ ವಹಿಸುವಂತೆ ತಿಳಿಸಿರುವ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಗಳ ವಿರುದ್ಧ ಔಷಧ ನಿಯಂತ್ರಣ ಇಲಾಖೆಯು ತನಿಖೆ ನಡೆಸಿ ಸದರಿ ಅಧಿಕಾರಿಗಳು ಕರ್ತವ್ಯ ಲೋಪ ಎಸಗಿರುವ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಗಳನ್ನು ಅಮಾನತ್ತುಗೊಳಿಸಿ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಔಷಧ ನಿಯಂತ್ರಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಶ್ರೀಮತಿ ಸುಧಾಸ್ವಾಮಿ ಚೀಫ್ ಸೈಂಟಿಫಿಕ್ ಆಫೀಸರ್, ಶ್ರೀ ಮೊಹಮ್ಮದ್ ಸೈಫುದ್ದೀನ್ ರುಬ್ಬಾನಿ ಸೈಂಟಿಫಿಕ್ ಆಫೀಸರ್ ಹಾಗೂ ಶ್ರೀ ಗಿರೀಶ್ ಎಂ.ಕೆ. ಜ್ಯೂನಿಯರ್ ಸೈಂಟಿಫಿಕ್ ಆಫೀಸರ್ ಔಷಧ ಪರೀಕ್ಷಾ ಪ್ರಯೋಗಾಲಯ ಬೆಂಗಳೂರು ಇವರುಗಳ ಕರ್ತವ್ಯ ಲೋಪ ಎಸಗಿರುವುದು ಮೇಲ್ನೋಟಕ್ಕೆ ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸದರಿ ಅಧಿಕಾರಿಗಳನ್ನು ಸೇವೆಯಿಂದ ಅಮಾನತ್ತುಗೊಳಿಸಿದೆ. ತದನಂತರ ಮೇಲೆ ಓದಲಾದ ಕ್ರಮಸಂಖ್ಯೆ (4)ರ ಆದೇಶದಲ್ಲಿ ಸದರಿ ಅಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14ಎ ರನ್ವಯ ಪ್ರಕರಣವನ್ನು ಮಾನ್ಯ ಕರ್ನಾಟಕ ಲೋಕಾಯುಕ್ತ ರವರಿಗೆ ವಹಿಸಲಾಗಿದೆ.

ಶ್ರೀಮತಿ ಸುಧಾಸ್ವಾಮಿ ಚೀಫ್ ಸೈಂಟಿಫಿಕ್ ಆಫೀಸರ್, ಶ್ರೀ ಮೊಹಮ್ಮದ್ ಸೈಫುದ್ದೀನ್ ರುಬ್ಬಾನಿ ಸೈಂಟಿಫಿಕ್ ಆಫೀಸರ್ ಹಾಗೂ ಶ್ರೀ ಗಿರೀಶ್ ಎಂ.ಕೆ. ಜ್ಯೂನಿಯರ್ ಸೈಂಟಿಫಿಕ್ ಆಫೀಸರ್ ಔಷಧ ಪರೀಕ್ಷಾ ಪ್ರಯೋಗಾಲಯ ಬೆಂಗಳೂರು ಇವರುಗಳು ಇಲಾಖಾ ಮುಖ್ಯಸ್ಥರಿಗೆ ಮತ್ತು ಸರ್ಕಾರಕ್ಕೆ ಮನವಿ ಸಲ್ಲಿಸಿ ಇವರುಗಳ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಮರುಸ್ಥಾಪಿಸುವಂತೆ ದಿನಾಂಕ : 27–11–2014, 17–12–2014 ಮತ್ತು 08–12–2014ರಲ್ಲಿ ಕೋರಿದ್ದರು. ಈ ಬಗ್ಗೆ ದಿನಾಂಕ : 11–03–2015ರ ಸರ್ಕಾರಿ ಪತ್ರದಲ್ಲಿ ನಿಬಂಧಕರು ಕರ್ನಾಟಕ ಲೋಕಾಯುಕ್ತ ಇವರ ಅಭಿಪ್ರಾಯವನ್ನು ಕೋರಲಾಗಿತ್ತು. ಸದರಿ ಅಧಿಕಾರಿಗಳನ್ನು ಸೇವೆಗೆ ಮರುಸ್ಥಾಪಿಸುವ ಬಗ್ಗೆ ಸರ್ಕಾರದ ಹಂತದಲ್ಲಿಯೇ ಕ್ರಮವಹಿಸಬಹುದೆಂದು ಮಾನ್ಯ ಕರ್ನಾಟಕ ಉಪಲೋಕಾಯುಕ್ತ, ಬೆಂಗಳೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಶ್ರೀಮತಿ ಸುಧಾಸ್ವಾಮಿ ಚೀಫ್ ಸೈಂಟಿಫಿಕ್ ಆಫೀಸರ್, ಶ್ರೀ ಮೊಹಮ್ಮದ್ ಸೈಫುದ್ದೀನ್ ರುಬ್ಬಾನಿ ಸೈಂಟಿಫಿಕ್ ಆಫೀಸರ್ ಹಾಗೂ ಶ್ರೀ ಗಿರೀಶ್ ಎಂ.ಕೆ. ಜ್ಯೂನಿಯರ್ ಸೈಂಟಿಫಿಕ್ ಆಫೀಸರ್ ಔಷಧ ಪರೀಕ್ಷಾ ಪ್ರಯೋಗಾಲಯ ಬೆಂಗಳೂರು ಇವರುಗಳು ಅಮಾನತ್ತಿನಲ್ಲಿ 06 ತಿಂಗಳ ಅವಧಿಯನ್ನು ಪೂರ್ಣಗೊಳಿಸಿರುವುದರಿಂದ, ಇಲಾಖಾ ವಿಚಾರಣೆ ಪ್ರಾರಂಭವಾಗದಿರುವುದರಿಂದ, ಜೀವನಾಂಶ ಭತ್ಯೆಯನ್ನು ಶೇ. 50 ರಿಂದ ಶೇ. 75ಕ್ಕೆ ಹೆಚ್ಚಿಸಬೇಕಾಗಬಹುದಾದ ಸಾಧ್ಯತೆ ಇದ್ದು, ಆಡಳಿತಾತ್ಮಕ ದೃಷ್ಟಿಯಿಂದ ಸದರಿಯವರುಗಳನ್ನು ಸೇವೆಯಲ್ಲಿ ಪುನರ್ ಸ್ಥಾಪಿಸುವುದು ಸಮಂಜಸವೆಂದು ಔಷಧ ನಿಯಂತ್ರಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸರ್ಕಾರವು ಔಷಧ ನಿಯಂತ್ರಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸದರಿ ಅಧಿಕಾರಿಗಳ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಮರುಸ್ಥಾಪಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 181 ಐಎಂಎಂ 2014, ಬೆಂಗಳೂರು, ದಿನಾಂಕ : 16–06–2015.**

ಪ್ರಸ್ತಾವನೆಯ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಸುಧಾಸ್ವಾಮಿ ಚೀಫ್ ಸೈಂಟಿಫಿಕ್ ಆಫೀಸರ್, ಶ್ರೀ ಮೊಹಮ್ಮದ್ ಸೈಫುದ್ದೀನ್ ರುಬ್ಬಾನಿ ಸೈಂಟಿಫಿಕ್ ಆಫೀಸರ್ ಹಾಗೂ ಶ್ರೀ ಗಿರೀಶ್ ಎಂ.ಕೆ. ಜ್ಯೂನಿಯರ್ ಸೈಂಟಿಫಿಕ್ ಆಫೀಸರ್ ಔಷಧ ಪರೀಕ್ಷಾ ಪ್ರಯೋಗಾಲಯ ಬೆಂಗಳೂರು ಇವರುಗಳ ಅಮಾನತ್ತನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 10 5)(ಸಿ) ರನ್ವಯ ತೆರವುಗೊಳಿಸಿ, ಇಲಾಖಾ ವಿಚಾರಣಾ ಕಾಯ್ದಿರಿಸಿ, ಸೇವೆಗೆ ಪುನರ್ ಸ್ಥಾಪಿಸಲಾಗಿದೆ.

ಮುಂದುವರೆದು ಸದರಿ ಅಧಿಕಾರಿಗಳನ್ನು ಈ ಕೆಳಕಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಪದನಾಮ | ಸ್ಥಳ ನಿಯುಕ್ತಿಗೊಳಿಸಿದ ಕಛೇರಿ |
|---|---|---|
| 1 | ಶ್ರೀಮತಿ ಸುಧಾಸ್ವಾಮಿ,<br>ಚೀಫ್ ಸೈಂಟಿಫಿಕ್ ಆಫೀಸರ್ | ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ ಬಳ್ಳಾರಿ ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಚೀಫ್ ಸೈಂಟಿಫಿಕ್ ಆಫೀಸರ್ ಶ್ರೀ ಎಸ್.ಎನ್. ಶಿವಶಂಕರ ಇವರ ಜಾಗಕ್ಕೆ. |
| 2 | ಶ್ರೀ ಪಿ. ಮೊಹಮ್ಮದ್ ಸೈಫುದ್ದೀನ್ ರುಬ್ಬಾನಿ,<br>ಸೈಂಟಿಫಿಕ್ ಆಫೀಸರ್ | ಬೆಂಗಳೂರು ಸರ್ಕಾರಿ ಔಷಧ ವಿಜ್ಞಾನಗಳ ಮಹಾವಿದ್ಯಾಲಯ (ಜಿ.ಸಿ.ಪಿ) ಇಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಗೆ ನಿಯೋಜನೆ ಮೇಲೆ ಒಂದು ದಿನ ಔಷಧ ನಿಯಂತ್ರಣ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗಿ ಮರು ದಿನ ನಿಯೋಜನೆ ಹುದ್ದೆಯಲ್ಲಿ ಕಾರ್ಯಭಾರ ವಹಿಸಿಕೊಳ್ಳತಕ್ಕದ್ದು. |
| 3 | ಶ್ರೀ ಗಿರೀಶ್ ಎಂ.ಕೆ.<br>ಜ್ಯೂನಿಯರ್ ಸೈಂಟಿಫಿಕ್ ಆಫೀಸರ್ | ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ ಬಳ್ಳಾರಿ ಇಲ್ಲಿ ಖಾಲಿ ಇರುವ ಜ್ಯೂನಿಯರ್ ಸೈಂಟಿಫಿಕ್ ಆಫೀಸರ್ ಹುದ್ದೆಗೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ ಮತ್ತು ಸಮನ್ವಯ)

**P.R. 385**

**SC-20**

## ಸಾರಿಗೆ ಸಚಿವಾಲಯ

**ವಿಷಯ :** ಸಾರಿಗೆ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾದ ಅಪರ ಸಾರಿಗೆ ಆಯುಕ್ತರ ವೃಂದಕ್ಕೆ ನೇಮಕಾತಿ ವಿಧಾನವನ್ನು ನಿಗಧಿಪಡಿಸಿದ ಕಾರ್ಯಕಾರಿ ಆದೇಶವನ್ನು ಮುಂದುವರೆಸುವ ಬಗ್ಗೆ – ಆದೇಶ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಾರಿಇ 292 ಸಾಇಸೇ 2013, ದಿನಾಂಕ : 07–12–2013.
2. ಸರ್ಕಾರದ ಆದೇಶ ಸಂಖ್ಯೆ : ಸಾರಿಇ 292 ಸಾಇಸೇ 2013, ದಿನಾಂಕ : 04–01–2014.
3. ಸಾರಿಗೆ ಇಲಾಖೆಯ ವೃಂದ ಪರಿಷ್ಕರಣ ಉಪ ಸಮಿತಿಯ ನಡವಳಿ ದಿನಾಂಕ : 05–02–2015.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 07–12–2013ರ ಸರ್ಕಾರಿ ಆದೇಶದಲ್ಲಿ ಸಾರಿಗೆ ಇಲಾಖೆಯಲ್ಲಿ ಹಾಲಿ ಇರುವ ಆರು ಜಂಟಿ ಸಾರಿಗೆ ಆಯುಕ್ತರ ಹುದ್ದೆಗಳ ಪೈಕಿ ನಾಲ್ಕು ಹುದ್ದೆಗಳನ್ನು ವೇತನ ಶ್ರೇಣಿ ರೂ. 48,900–63,600ರ ಅಪರ ಸಾರಿಗೆ ಆಯುಕ್ತರ ಹುದ್ದೆಗಳನ್ನಾಗಿ ಉನ್ನತೀಕರಿಸಿ ಆದೇಶ ಹೊರಡಿಸಲಾಗಿದೆ.

ಸದರಿ ಅಪರ ಸಾರಿಗೆ ಆಯುಕ್ತರ ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಕಾಲಾವಕಾಶ ಬೇಕಾಗಿರುವುದರಿಂದ, ಈ ಹುದ್ದೆಗಳನ್ನು ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗಧಿಪಡಿಸಿ ತುಂಬಲು ಅವಕಾಶ ಕಲ್ಪಿಸಲು ಉದ್ದೇಶಿಸಿ, ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ ಮೇಲೆ ಓದಲಾದ ಕ್ರ.ಸಂ. (2)ರ ಸರ್ಕಾರಿ ಆದೇಶದಲ್ಲಿ ಕಾರ್ಯಕಾರಿ ಆದೇಶ ಹೊರಡಿಸುವ ಮೂಲಕ ಮೇಲ್ಕಂಡ ಹುದ್ದೆಗಳಿಗೆ ನೇಮಕಾತಿ ವಿಧಾನವನ್ನು ಜಾರಿಗೆ ತರಲಾಗಿದೆ.

ಆದರೆ, ಸದರಿ ಕಾರ್ಯಕಾರಿ ಆದೇಶವು ಆದೇಶ ಹೊರಡಿಸಿದ್ದ ದಿನಾಂಕದಿಂದ ಆರು ತಿಂಗಳು ಕಾಲ ಮಾತ್ರ ಜಾರಿಯಲ್ಲಿರುತ್ತದೆ. ಆದ್ದರಿಂದ ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ನಡವಳಿಗಳನುಸಾರ ದಿನಾಂಕ : 05–02–2015ರಂದು ನಡೆದ ಸಾರಿಗೆ ಇಲಾಖೆಯ ವೃಂದ ಪರಿಷ್ಕರಣ ಉಪ ಸಮಿತಿ ಸಭೆಯಲ್ಲಿ ಅಪರ ಸಾರಿಗೆ ಆಯುಕ್ತರ ಹುದ್ದೆಗಳನ್ನು ಹಾಗೂ ಸದರಿ ಹುದ್ದೆಗಳಿಗೆ ನೇಮಕಾತಿ ವಿಧಾನವನ್ನು ಸಾರಿಗೆ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಜರೂರಾಗಿ ತಿದ್ದುಪಡಿ ತಂದು ಅಳವಡಿಸಿಕೊಳ್ಳುವಂತೆಯೂ ಹಾಗೂ ಈ ಬಗ್ಗೆ ವಿಳಂಬವಾದಲ್ಲಿ ಮತ್ತೆ 6 ತಿಂಗಳ ಅವಧಿಗೆ ಕಾರ್ಯಕಾರಿ ಆದೇಶ ಹೊರಡಿಸುವಂತೆಯೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಪ್ರತಿನಿಧಿ ಸೂಚಿಸಿದ್ದರ ಮೇರೆಗೆ, ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ನಿಯಮಗಳನ್ನು ಜರೂರಾಗಿ ತರುವುದನ್ನು ಕಾಯ್ದಿರಿಸಿ, ಸದರಿ ಆದೇಶದ ಸಿಂಧುತ್ವ ಅವಧಿ ಮುಗಿದಿರುವುದರಿಂದ ಪುನಃ 6 ತಿಂಗಳ ಅವಧಿಗೆ ವಿಸ್ತರಿಸಲು ಸಭೆ ತೀರ್ಮಾನಿಸಿರುತ್ತದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಾರಿಇ 136 ಸಾಇಸೇ 2014, ಬೆಂಗಳೂರು, ದಿನಾಂಕ : 17–06–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾರಿಗೆ ಇಲಾಖೆಯಲ್ಲಿ ಹೊಸದಾಗಿ ಉನ್ನತೀಕರಿಸುವುದರ ಮೂಲಕ ಸೃಜಿಸಲಾದ ಅಪರ ಸಾರಿಗೆ ಆಯುಕ್ತರು ವೃಂದಕ್ಕೆ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವುದನ್ನು ಕಾಯ್ದಿರಿಸಿ, ನೇಮಕಾತಿ ವಿಧಾನವನ್ನು ನಿಗಧಿ ಮಾಡಿದ ಕಾರ್ಯಕಾರಿ ಆದೇಶ ಸಂಖ್ಯೆ : ಸಾರಿಇ 292 ಸಾಇಸೇ 2013, ದಿನಾಂಕ : 04–01–2014ರ ಸಿಂಧುತ್ವ ಅವಧಿಯು ದಿನಾಂಕ : 03–07–2014ಕ್ಕೆ ಮುಕ್ತಾಯವಾಗಿದ್ದು, ಸದರಿ ಕಾರ್ಯಕಾರಿ ಆದೇಶದ ಸಿಂಧುತ್ವ ಅವಧಿಯನ್ನು ದಿನಾಂಕ : 04–07–2014 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೀರೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾರಿಗೆ ಇಲಾಖೆ.

**P.R. 386**

**SC-50**

## ಇಂಧನ ಸಚಿವಾಲಯ

**ವಿಷಯ :** ಶ್ರೀ ಕೆ. ಚಂದ್ರಶೇಖರ ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾ ಇಲಾಖೆ, ಬಳ್ಳಾರಿ ಇವರನ್ನು ಸೇವೆಯಿಂದ ತೆಗೆದುಹಾಕಲಾದ ಮತ್ತು ಪುನಃ ಸೇವೆಗೆ ತೆಗೆದುಕೊಳ್ಳಲಾದ ನಡುವಿನ ಅವಧಿಗೆ ವೇತನ ಭತ್ಯೆಗಳ ಮಂಜೂರಾತಿ ಕುರಿತು.

**ಓದಲಾಗಿದೆ :**

1. ಸರ್ಕಾರಿ ಆದೇಶದ ಸಂಖ್ಯೆ : ಇಎನ್ 52 ಇಬಿಎಸ್ 2008, ದಿನಾಂಕ : 15–07–2006.
2. ಆದೇಶ ಸಂಖ್ಯೆ : ಇಎನ್ 52 ಇಬಿಎಸ್ 2006, ದಿನಾಂಕ : 09–10–2006.
3. ಆದೇಶ ಸಂಖ್ಯೆ : 52 ಇಬಿಎಸ್ 2006, ದಿನಾಂಕ : 30–10–2006.
4. ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶ ದಿನಾಂಕ : 27–02–2013.
5. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ) ಸಿಟಿಎಲ್–28/ಸಿಆರ್–6/2006, ದಿನಾಂಕ : 17–04–2013.
6. ಸರ್ಕಾರಿ ಆದೇಶದ ಸಂಖ್ಯೆ : ಇಎನ್ 43 ಇಬಿಎಸ್ 2009, ದಿನಾಂಕ : 26–10–2013.
7. ಕ್ರಿಮಿನಲ್ ಅಪೀಲು ಸಂಖ್ಯೆ : 2573/2013ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ದಿನಾಂಕ : 16–09–2014 ರ ಆದೇಶ.
8. ಅರ್ಜಿ ಸಂಖ್ಯೆ : 7250/2013ರಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ದಿನಾಂಕ : 13–01–2015ರ ತೀರ್ಪು.
9. ಸರ್ಕಾರಿ ಆದೇಶದ ಸಂಖ್ಯೆ : ಇಎನ್ 244 ಇಬಿಎಸ್ 2014, ದಿನಾಂಕ : 25–03–2015.
10. ಸುತ್ತೋಲೆ ಸಂಖ್ಯೆ : ಸಿಆಸುಇ 22 ಸೇಇವಿ 2001, ದಿನಾಂಕ : 05–07–2002.

1. ಕೆ. ಚಂದ್ರಶೇಖರ ರೆಡ್ಡಿ, (ಕೆ.ಸಿ. ರೆಡ್ಡಿ), ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ, ಇವರು ಬಳ್ಳಾರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಟ್ರಾನ್ಸ್‌ಮಿಷನ್ ಸೆಂಟರ್‌ಗಳನ್ನು ತಪಾಸಣೆ ಮಾಡಿ ಪರವಾನಗಿಯ ಪತ್ರ ನೀಡಲು ಅಕ್ರಮ ಹಣವನ್ನು ಕೇಳಿದರು ಎಂಬ ದೂರಿನ ಮೇಲೆ ದಿನಾಂಕ : 19-06-2006 ರಂದು ಆರೋಪಿತರ ಕಛೇರಿಯಲ್ಲಿ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಯಲ್ಲಿ ರೂ. 10,000/- ಲಂಚ ಪಡೆಯುವಾಗ ಸಿಕ್ಕಿಬಿದ್ದಿರುತ್ತಾರೆ. ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 10(1)(ಎ)ರ ಮೇರೆಗೆ ತನಿಖೆಯನ್ನು ಬಾಕಿ ಇಟ್ಟು ಮೇಲೆ ಓದಲಾದ ಸಂಖ್ಯೆ (1)ರ ಆದೇಶದಲ್ಲಿ ಶ್ರೀ ಕೆ.ಸಿ. ರೆಡ್ಡಿ ಇವರನ್ನು ಅಮಾನತ್ತಿನಲ್ಲಿಡಲಾಗಿತ್ತು. ನಂತರ ಮೇಲೆ ಓದಲಾದ ಸರ್ಕಾರಿ ಆದೇಶ ಸಂಖ್ಯೆ (2) ರಲ್ಲಿ ಸದರಿಯವರ ಅಮಾನತ್ತನ್ನು ತೆರವುಗೊಳಿಸಿ ಅವರ ವಿರುದ್ಧ ಹುಡಲಾಗಿರುವ ಪ್ರಕರಣ ಸಂಖ್ಯೆ : 6/2006 ಹಾಗೂ ಸಕ್ಷಮ ನ್ಯಾಯಾಲಯದಲ್ಲಿ ಹೂಡಬಹುದಾದ ಪ್ರಕರಣಗಳಲ್ಲಿ ಆಗುವ ಅಂತಿಮ ತೀರ್ಮಾನವನ್ನು ಬಾಕಿ ಇಟ್ಟು ಧಾರವಾಡದಲ್ಲಿ ಖಾಲಿ ಇದ್ದ ವಿದ್ಯುತ್ ಪರಿವೀಕ್ಷಕರ ಹುದ್ದೆಗೆ ನೇಮಕ ಮಾಡಲಾಗಿತ್ತು. ನಂತರ ಲೋಕಾಯುಕ್ತ ಪೊಲೀಸರ ಕೋರಿಕೆಯಂತೆ ಸದರಿಯವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7,13(1) (ಡಿ) ಸಹವಾಚನ 13(2)ರ ಮೇರೆಗೆ ಸದರಿಯವರು ಎಸಗಿರುವ ಶಿಕ್ಷಾರ್ಹ ಅಪರಾಧ ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 19 (1)ರನ್ವಯ ಅಭಿಯೋಜನೆಗೊಳಿಸಲು ಮೇಲೆ ಓದಲಾದ ಸಂಖ್ಯೆ (3)ರಲ್ಲಿನ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಯಿತು.

2. ಶ್ರೀ ಚಂದ್ರಶೇಖರ ರೆಡ್ಡಿಯವರ ವಿರುದ್ಧ ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಅಭಿಯೋಜನೆ ಬಗ್ಗೆ ನಡೆಯುತ್ತಿದ್ದ ವಿಚಾರಣೆಯಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ : 27-02-2013ರ ಆದೇಶದಲ್ಲಿ ಸದರಿಯವರಿಗೆ ಕಠಿಣ ಸಜೆ ಶಿಕ್ಷೆಯನ್ನು ವಿಧಿಸಿದೆ. ಬಳ್ಳಾರಿ ಸೆಷನ್ಸ್ ನ್ಯಾಯಾಲಯವು ಶ್ರೀ ಕೆ.ಸಿ. ರೆಡ್ಡಿಯವರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ-7 ಜೊತೆಗೆ 13(2)ರ ಅಡಿಯಲ್ಲಿ ಆರೋಪಗಳು ಸಾಬೀತಾಗಿದ್ದು ಸದರಿ ಆರೋಪಿತರಿಗೆ 1 ವರ್ಷ ಕಠಿಣ ಸಜೆ ಮತ್ತು ರೂ. 5,000/- ದಂಡ ಹಾಗೂ ದಂಡ ಕಟ್ಟಲು ತಪ್ಪಿದಲ್ಲಿ 2 ತಿಂಗಳ ಸಾದಾ ಸಜೆ ಹಾಗೂ ಕಲಂ 13(1) (ಡಿ) ಜೊತೆಗೆ 13(2)ರಡಿಯಲ್ಲಿ ಆರೋಪಗಳು ಸಾಬೀತಾಗಿದ್ದಕ್ಕೆ ಸದರಿ ಆರೋಪಿಗೆ 2 ವರ್ಷ ಕಠಿಣ ಸಜೆ ಅನುಭವಿಸುಂತೆ ಮತ್ತು ರೂ. 10,000/- ದಂಡ ಕಟ್ಟುವಂತೆ, ದಂಡ ಕಟ್ಟಲು ತಪ್ಪಿದಲ್ಲಿ 4 ತಿಂಗಳ ಸಾದಾ ಸಜೆ ಅನುಭವಿಸುವಂತೆ ಶಿಕ್ಷೆ ವಿಧಿಸಿದೆ. ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶದ ಹಿನ್ನಲೆಯಲ್ಲಿ, ಭಾರತೀಯ ಸಂವಿಧಾನದ ಅನುಚ್ಛೇದ 311(2)ರ ಪ್ರವರ್ಗ, ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿಗಳು 1957ರ ನಿಯಮ 14 ಹಾಗೂ 10 (2) ಮತ್ತು ಸರ್ವೋಚ್ಚ ನ್ಯಾಯಾಲಯವು ಕ್ರಿಮಿನಲ್ ಮೇಲ್ಮನವಿ ನಂ. 770/2001 ರಲ್ಲಿ ನೀಡಿರುವ ತೀರ್ಪಿನತ್ತ ಸೆಳೆಯುತ್ತ ಶ್ರೀ ಕೆ.ಸಿ. ರೆಡ್ಡಿ ಅವರನ್ನು ಸೇವೆಯಿಂದ ವಜಾಗೊಳಿಸಲು ಶೀಘ್ರದಲ್ಲೇ ಕ್ರಮ ಕೈಗೊಳ್ಳಬೇಕಾಗಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ಸರ್ಕಾರವನ್ನು ಕೋರಿದರು.

3. ಆರೋಪಿ ಅಧಿಕಾರಿಯಾದ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ಇವರಿಗೆ ಬಳ್ಳಾರಿ ಸೆಷನ್ಸ್ ನ್ಯಾಯಾಲಯವು ವಿಧಿಸಿದ ಶಿಕ್ಷೆಯ ಹಿನ್ನೆಲೆಯಲ್ಲಿ, ತೀವ್ರ ಆರೋಪಕ್ಕಾಗಿ ದೋಷ ಸಿದ್ಧಿಯಾಗಿ ದಂಡನೆಗೆ ಗುರಿಯಾದ ಈ ಆರೋಪಿ ಅಧಿಕಾರಿಯು ಸೇವೆಯಲ್ಲಿ ಮುಂದುವರೆಯುವುದು ಸೂಕ್ತವಲ್ಲವೆಂದು ಕಂಡು ಬಂದ ಕಾರಣ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8 (vii)ರ ಪ್ರಕಾರ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ, ವಿದ್ಯುತ್ ಪರಿವೀಕ್ಷಕರು, ಬಳ್ಳಾರಿ ಇವರ ಮೇಲೆ ತಕ್ಷಣದಿಂದ ಜಾರಿಗೆ ಬರುವಂತೆ "ಸೇವೆಯಿಂದ ತೆಗೆದುಹಾಕುವ" ದಂಡನೆಯನ್ನು ವಿಧಿಸಿ, ಮೇಲೆ ಕ್ರಮ ಸಂಖ್ಯೆ : 6ರಲ್ಲಿ ಓದಲಾದ ಆದೇಶವನ್ನು ಹೊರಡಿಸಲಾಯಿತು.

4. ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ಇವರು ಸರ್ಕಾರದ ಮೇಲ್ಕಂಡ ಆದೇಶವನ್ನು ಪ್ರಶ್ನಿಸಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ 7250/2013ರಂತೆ ಅರ್ಜಿ ಸಲ್ಲಿಸಿದ್ದರು. ಮುಂದುವರೆದು, ತಮಗೆ ದಂಡನೆಯನ್ನು ವಿಧಿಸಿದ ಬಳ್ಳಾರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ದಿನಾಂಕ : 27-02-2013ರ ಆದೇಶವನ್ನು ಪ್ರಶ್ನಿಸಿ ಮಾನ್ಯ ಉಚ್ಚ ನ್ಯಾಯಾಲಯ, ಧಾರವಾಡ ಪೀಠದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ : 2573/2013ರಂತೆ ಅರ್ಜಿ ಸಲ್ಲಿಸಿದ್ದರು.

5. ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ಕ್ರಿಮಿನಲ್ ಅಪೀಲು ಸಂಖ್ಯೆ : 2573/2013ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯ, ಧಾರವಾಡ ಪೀಠವು ದಿನಾಂಕ : 16-09-2014ರ ತನ್ನ ಆದೇಶದಲ್ಲಿ ಶ್ರೀ ಕೆ.ಸಿ. ರೆಡ್ಡಿಯವರ ಮೇಲ್ಮನವಿಯನ್ನು ಪುರಸ್ಕರಿಸಿ ಕೆಳ ನ್ಯಾಯಾಲಯದ ತೀರ್ಪನ್ನು ತಳ್ಳಿಹಾಕಿರುತ್ತದೆ ಹಾಗೂ ಪ್ರಸ್ತಾಪಿತ ಅಧಿಕಾರಿಗೆ ಅಭಿಯೋಜನೆಗೊಳಿಸಲು ಮಂಜೂರಾತಿ ನೀಡಿ ಪೀಠಾಧಿಕಾರಿ ಹೊರಡಿಸಿರುವ ಆದೇಶವನ್ನು ಸಹ ತಳ್ಳಿಹಾಕಲಾಗಿರುತ್ತದೆ. ಮಾನ್ಯ ಉಚ್ಚ ನ್ಯಾಯಾಲಯದ ಸದರಿ ತೀರ್ಪಿನ ಹಿನ್ನಲೆಯಲ್ಲಿ, ತಮ್ಮನ್ನು ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಿದ ಸರ್ಕಾರದ ದಿನಾಂಕ : 26-10-2013ರ ಆದೇಶವನ್ನು ರದ್ದುಪಡಿಸಲು ಕೋರಿ ಅರ್ಜಿದಾರರಾದ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ರವರು ಕೆ.ಎ.ಟಿ.ಗೆ ಮನವಿ ಸಲ್ಲಿಸಲಾಗಿ, ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ತೀರ್ಪಿನಲ್ಲಿ, ಪ್ರಸ್ತಾಪಿತ ಅಧಿಕಾರಿಯನ್ನು ಸೇವೆಯಿಂದ ತೆಗೆದುಹಾಕಲಾದ ದಿನಾಂಕ : 28-10-2013ರ ಆದೇಶವನ್ನು ರದ್ದುಪಡಿಸಿ ತಕ್ಷಣವೇ ಅರ್ಜಿದಾರರನ್ನು ಸೇವೆಗೆ ತೆಗೆದುಕೊಳ್ಳಲು ಮತ್ತು ನಿಯಮಾನುಸಾರ ಅರ್ಜಿದಾರರಿಗೆ ಲಭ್ಯವಾಗಬಹುದಾದ consequential benefits ನ್ನು ಮಂಜೂರು ಮಾಡಲು ನಿರ್ದೇಶನ ನೀಡಿರುತ್ತದೆ.

6. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ತೀರ್ಪಿನ ಹಿನ್ನಲೆಯಲ್ಲಿ ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಕೆ. ಚಂದ್ರಶೇಖರ್ ರೆಡ್ಡಿ ಇವರನ್ನು ಪುನಃ ಸೇವೆಗೆ ತೆಗೆದುಕೊಳ್ಳಲಾಗಿರುತ್ತದೆ.

7. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಮೇಲೆ ಕ್ರಮ ಸಂಖ್ಯೆ (10)ರಲ್ಲಿನ ಸುತ್ತೋಲೆಯಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯವು SLP(c) ಸಂಖ್ಯೆ : 22583/1996ರ ಪ್ರಕರಣದಲ್ಲಿ ದಿನಾಂಕ : 28-10-1996ರಂದು ನೀಡಿರುವ ತೀರ್ಪಿನ ಕಡೆಗೆ ಗಮನ ಸೆಳೆಯುತ್ತಾ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆಯಾಗಿ ಒಬ್ಬ ಸರ್ಕಾರಿ ನೌಕರನನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ ವಜಾ ಆದ ದಿನಾಂಕದಿಂದ ಮತ್ತೆ ಸೇವೆಗೆ ತೆಗೆದುಕೊಂಡ ದಿನಾಂಕದವರೆಗೆ ಬಾಕಿ ವೇತನ, ವೇತನ ಬಡ್ತಿ, ಸೇವೆ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಅವರು ಸ್ವಯಂಚಾಲಿತರಾಗಿ ಅರ್ಹರಾಗಿರುವುದಿಲ್ಲ. ಪ್ರತಿಯೊಂದು ಪ್ರಕರಣಕ್ಕೆ ಸಂಬಂಧಿಸಿದ ಸಂದರ್ಭ ಹಾಗೂ ವಾಸ್ತವಾಂಶಗಳ ಹಿನ್ನಲೆಯಲ್ಲಿ ಬಾಕಿ ವೇತನ ಇತ್ಯಾದಿ ಪಡೆಯಲು ಅವನು ಅರ್ಹನೇ ಅಥವಾ ಇಲ್ಲವೆ? ಎನ್ನುವ ಬಗ್ಗೆ ಪರಿಶೀಲಿಸಿ ತೀರ್ಮಾನಿಸಬೇಕಾಗುತ್ತದೆಂದು ಸೂಚಿಸಲಾಗಿರುತ್ತದೆ.

8. ಕ್ರಿಮಿನಲ್ ಪ್ರಕರಣಗಳಲ್ಲಿನ ಗೌರವಾನ್ವಿತ ಬಿಡುಗಡೆ (Honourable Acquittal) ಕುರಿತಂತೆ ಮಾನ್ಯ ಉಚ್ಚ ನ್ಯಾಯಾಲಯವು Mehiboobsab Vs Upalokayuktha and others (ILR 2002 KAR 2535) ರಲ್ಲಿ "Where the Criminal court acquits an accused on a technical ground (for exambple on the ground of failure to obtain requisite sanction for prosecution or on the ground of limitation) or where the accused is acquitted for want of sufficient evidence or non examination of material witnesses or on account of material … then such acquittal is not an exoneration of the accused by an honourable acquittal" ಎಂದು ತಿಳಿಸಿರುತ್ತದೆ. ಮುಂದುವರೆದಂತೆ ಮಾನ್ಯ ಸರ್ವೋಚ್ಚ ನ್ಯಾಯಾಲಯವು ಶ್ರೀ ಕೃಷ್ಣಕಾಂತ್ ರಘುನಾಥ್ ಬಿಬನ್ವೇಕರ್ ಪ್ರಕರಣದಲ್ಲಿ "Acquittal in a criminal case-Reinstatement after acquittal-Employee not entitled to consequential benefit as a matter of course-Back wages, increment and retrial benefits can not be given as a matter of course-Suspension period can be treated as not spent on duty" ಎಂದು ನಿರ್ದೇಶಿಸಿದೆ.

9. ಪ್ರಸ್ತುತ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ಆರೋಪದಿಂದಾಗಿನ ಬಿಡುಗಡೆಯನ್ನು on merits of the case ಪರಿಗಣಿಸದೆ, ತಾಂತ್ರಿಕ ದೋಷಗಳನ್ನು ಪರಿಗಣಿಸಿ (Invalid Sanction Order) ಈ ಬಗೆಗಿನ ಆದೇಶವನ್ನು ಬದಿಗಿರಿಸಿ ಸೇವಾ ಪುನರ್ ಸ್ಥಾಪನೆಗೆ ಆದೇಶಿಸಿದ್ದು, ಅಪೀಲಿನಲ್ಲಿ ದೊರಕಿದ ತಾಂತ್ರಿಕ ಕಾರಣದ ಮೇರೆಗಿನ ಬಿಡುಗಡೆಯಿಂದ ಪುನರ್ ಸ್ಥಾಪನೆಗೆ ಅರ್ಹವಾದರೂ ಸಹ, ಹಿಂದಿನ ಸೌಲಭ್ಯಗಳಿಗೆ ಸ್ವಯಂ ತಾನೇ ಅರ್ಹವಾಗುವುದಿಲ್ಲ. ಆದುದರಿಂದ, ಇವರನ್ನು ಸೇವೆಗೆ ಪುನರ್ ಸ್ಥಾಪನೆಗೊಳಿಸಿದ ಮೇರೆಗೆ ಕರ್ತವ್ಯಕ್ಕೆ ವರದಿಯನ್ನು ಮಾಡಿಕೊಂಡ ಪೂರ್ವದ ಅವಧಿಯನ್ನು "ಕರ್ತವ್ಯದ ಮೇಲಿಲ್ಲದ ಅವಧಿ" (period not spent on duty) ಎಂದು ಪರಿಗಣಿಸಿ, ಈ ಅವಧಿಗೆ ವೇತನ ಭತ್ಯೆಗಳ ಪ್ರಮಾಣವನ್ನು ಜೀವನಾಂಶ ಭತ್ಯೆಯ ಪ್ರಮಾಣಕ್ಕೆ ಸೀಮಿತಗೊಳಿಸಿ ಮಂಜೂರು ಮಾಡಲು ನಿರ್ಣಯಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 244 ಇಬಿಎಸ್ 2014, ಬೆಂಗಳೂರು, ದಿನಾಂಕ : 17-06-2015.**

ಶ್ರೀ ಕೆ. ಚಂದ್ರಶೇಖರ್ ರೆಡ್ಡಿ, ವಿದ್ಯುತ್ ಪರಿವೀಕ್ಷಕರು ಇವರನ್ನು ದಿನಾಂಕ : 26-10-2013ರ ಸರ್ಕಾರಿ ಆದೇಶದನ್ವಯ ಸೇವೆಯಿಂದ ತೆಗೆದುಹಾಕಲಾದ ಮತ್ತು ದಿನಾಂಕ : 25-03-2015ರ ಸರ್ಕಾರಿ ಆದೇಶದನ್ವಯ ಸೇವೆಗೆ ಪುನರ್ ಸ್ಥಾಪಿಸುವ ನಡುವಿನ ಅವಧಿಯನ್ನು "ಕರ್ತವ್ಯದ ಮೇಲಿಲ್ಲದ ಅವಧಿ" (period not spent on duty) ಎಂದು ಪರಿಗಣಿಸಿ, ಈ ಅವಧಿಗೆ ಇವರ ವೇತನ ಭತ್ಯೆಗಳ ಪ್ರಮಾಣವನ್ನು ಜೀವನಾಂಶ ಭತ್ಯೆಯ ಪ್ರಮಾಣಕ್ಕೆ ಸೀಮೀತಗೊಳಿಸಿ ಮಂಜೂರು ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಶಿವಕುಮಾರ್**
ಪೀಠಾಧಿಕಾರಿ,
ಇಂಧನ ಇಲಾಖೆ.

**P.R. 387**

**SC-50**

## ಇಂಧನ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಇಎನ್ 27 ಇಬಿಎಸ್ 2013, ಬೆಂಗಳೂರು, ದಿನಾಂಕ : 18-06-2015.**

ಸರ್ಕಾರಿ ಸಂಖ್ಯೆ : ಇಎನ್ 27 ಇಬಿಎಸ್ 2013, ದಿನಾಂಕ : 24-11-2014ರ ಅಧಿಸೂಚನೆ-I ರ ಕನ್ನಡ ಭಾಷಾ ಮುದ್ರಣದಲ್ಲಿ "ಯೂನಿಟ್ಟಿಗೆ ರೂ. 10 (ಹತ್ತು ಪೈಸೆ) ರಂತೆ" ಎಂಬುದರ ಬದಲಾಗಿ "ಯೂನಿಟ್ಟಿಗೆ ಹತ್ತು ಪೈಸೆ (10 ಪೈಸೆ) ರಂತೆ" ಎಂದು ಹಾಗೂ ಅಧಿಸೂಚನೆ-II ರ ಆಂಗ್ಲ ಭಾಷಾ ಮುದ್ರಣದಲ್ಲಿ "five paise (0.05 paise) s per unit" ಎಂಬುದರ ಬದಲಾಗಿ "five paise (5 paise)s per unit" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಶಿವಕುಮಾರ್**
ಪೀಠಾಧಿಕಾರಿ,
ಇಂಧನ ಇಲಾಖೆ.

**P.R. 388**

**SC-500**

## ಇಂಧನ ಸಚಿವಾಲಯ

**ವಿಷಯ :** "ನಗರ ಜ್ಯೋತಿ" ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ Energy Efficiency Services Limited (EESL) ಹಾಗೂ ನಗರ ಪಾಲಿಕೆಗಳೊಂದಿಗೆ ಮಾಡಿಕೊಳ್ಳಬೇಕಾದ ಸರ್ವಿಸ್ ಲೆವೆಲ್ ಒಪ್ಪಂದದ ಕರಡು ಪ್ರತಿಯನ್ನು ಪರಿಶೀಲಿಸಿ ಪೂರ್ಣಗೊಳಿಸಲು ಸಮಿತಿ ರಚಿಸುವ ಕುರಿತು.

**ಓದಲಾಗಿದೆ :**

1. ದಿನಾಂಕ : 26-05-2015 ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಇಂಧನ ಇಲಾಖೆರವರ ಅಧ್ಯಕ್ಷತೆಯಲ್ಲಿ ನಡೆದ "ನಗರ ಜ್ಯೋತಿ ಯೋಜನೆ" ಯನ್ನು ಅನುಷ್ಠಾನಗೊಳಿಸುವ ಕುರಿತು ನಡೆದ ಸಭೆಯ ನಡವಳಿ ಸಂಖ್ಯೆ : ಇಎನ್ 23 ವಿಎಸ್‌ಸಿ 2014, ದಿನಾಂಕ : 12-06-2015.
2. 2015-16ನೇ ಸಾಲಿನ ಆಯವ್ಯಯ ಕಂಡಿಕೆ ಸಂಖ್ಯೆ : 388.

**ಪ್ರಸ್ತಾವನೆ :**

ಸನ್ಮಾನ್ಯ ಮುಖ್ಯಮಂತ್ರಿಗಳು ತಮ್ಮ ಆಯವ್ಯಯ 2015–16ರ ಭಾಷಣ ಕಂಡಿಕೆ 388ರಲ್ಲಿ ನಗರ ಪಾಲಿಕೆಗಳ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ಸಂಯೋಜಿತ ಪ್ರಯತ್ನದೊಂದಿಗೆ ಪ್ರಸ್ತಾವಿತ "ನಗರ ಜ್ಯೋತಿ" ಯೋಜನೆಯಡಿ ಎಲ್ಲಾ ನಗರ ಪಾಲಿಕೆಗಳಲ್ಲಿ ಹಾಲಿಯಿರುವ MV/SV ಲ್ಯಾಂಪ್‌ಗಳನ್ನು LED ಲ್ಯಾಂಪ್‌ಗಳಿಂದ ಬದಲಾಯಿಸಲಾಗುವುದೆಂದು ಘೋಷಿಸಿರುತ್ತಾರೆ.

ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಸಂಬಂಧ ಮೇಲೆ ಓದಲಾದ (1)ರಂತೆ, ದಿನಾಂಕ : 26–05–2015ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಇಂಧನ ಇಲಾಖೆರವರ ಅಧ್ಯಕ್ಷತೆಯಲ್ಲಿ ನಗರ ಪ್ರದೇಶಗಳಲ್ಲಿ ಇಂಧನ ದಕ್ಷತೆಯುಳ್ಳ ಎಲ್.ಇ.ಡಿ. ಬೀದಿ ದೀಪಗಳನ್ನು ಅಳವಡಿಸಲು Energy Efficiency Services Limited (EESL), ಆರ್ಥಿಕ ಇಲಾಖೆ ಪ್ರತಿನಿಧಿ, ನಗರಾಭಿವೃದ್ಧಿ ಇಲಾಖೆ ಪ್ರತಿನಿಧಿ, ಆಯುಕ್ತರು, ಬಿ.ಬಿ.ಎಂ.ಪಿ. ನಿರ್ದೇಶಕರು, ಕರ್ನಾಟಕ ಪೌರಾಡಳಿತ ನಿರ್ದೇಶನಾಲಯ, ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ಮತ್ತು ಬೆಸ್ಕಾಂ ರವರೊಂದಿಗೆ ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಬಂಧ ಚರ್ಚಿಸಲಾಗಿರುತ್ತದೆ.

ಮೇಲೆ ಓದಲಾದ (1)ರಂತೆ, EESL ರವರು ನಗರ ಪಾಲಿಕೆಗಳಲ್ಲಿ ಹಾಲಿಯಿರುವ MV/SV ಲ್ಯಾಂಪ್‌ಗಳನ್ನು LED ಲ್ಯಾಂಪ್‌ಗಳಿಂದ ಬದಲಾಯಿಸಲು, ನಗರ ಪಾಲಿಕೆ ಹಾಗೂ EESL ಒಳಗೊಂಡಂತೆ 20:80 (ನಗರ ಪಾಲಿಕೆ–20, EESL–80)ರ ಅನುಪಾತದಲ್ಲಿ ವೆಚ್ಚವನ್ನು ಭರಿಸಿದಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಬಹುದು ಮತ್ತು ನಗರ ಪಾಲಿಕೆ ರವರು ಎಲ್.ಇ.ಡಿ. ಬೀದಿ ದೀಪಗಳನ್ನು ಅಳವಡಿಸಿದ ನಂತರ ವಿದ್ಯುತ್ ಬಿಲ್‌ನಲ್ಲಿ ಉಳಿತಾಯದ ಮೊತ್ತವನ್ನು EESL ರವರಿಗೆ ನಿಗಧಿಯಂತೆ ಪಾವತಿಸಬೇಕಾಗಿರುತ್ತದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಲು 7 ವರ್ಷದ ವರೆಗಿನ ಸರ್ವಿಸ್ ಲೆವೆಲ್ ಒಪ್ಪಂದವನ್ನು ಸಂಬಂಧಪಟ್ಟ ಇಲಾಖೆಯೊಂದಿಗೆ ಮಾಡಿಕೊಳ್ಳಬೇಕಾಗಿರುತ್ತದೆ ಹಾಗೂ ಸರ್ವಿಸ್ ಲೆವೆಲ್ ಒಪ್ಪಂದವಾದ 8 ವಾರಗಳೊಳಗೆ ಅನುಷ್ಠಾನ ಪ್ರಕ್ರಿಯೆ ಪ್ರಾರಂಭ ಮಾಡುವುದಾಗಿ, ಅನಂತರ 9 ತಿಂಗಳೊಳಗಾಗಿ ಅನುಷ್ಠಾನ ಪ್ರಕ್ರಿಯೆಯನ್ನು ಪೂರ್ಣಗೊಳಿಸುವುದಾಗಿ ತಿಳಿಸಿರುತ್ತಾರೆ.

EESL ರವರು ಸರ್ವಿಸ್ ಲೆವೆಲ್ ಒಪ್ಪಂದದ ಕರಡು ಪ್ರತಿಯನ್ನು ಅನುಮೋದನೆಗೆ ಸಲ್ಲಿಸಿರುತ್ತಾರೆ. ಈ ಒಪ್ಪಂದದ ಕರಡು ಪ್ರತಿಯನ್ನು ಪರಿಶೀಲಿಸಿ ಪೂರ್ಣಗೊಳಿಸಲು ಒಂದು ಸಮಿತಿಯನ್ನು ರಚಿಸುವ ಅವಶ್ಯಕತೆ ಕಂಡುಬಂದಿರುವುದರಿಂದ ಈ ಕೆಳಕಂಡ ಸಮಿತಿಯನ್ನು ರಚಿಸಿ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 52 ವಿಎಸ್‌ಸಿ 2015, ಬೆಂಗಳೂರು, ದಿನಾಂಕ : 17–06–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ EESL ರವರ ಸರ್ವಿಸ್ ಲೆವೆಲ್ ಒಪ್ಪಂದದ ಕರಡು ಪ್ರತಿಯನ್ನು ಪರಿಶೀಲಿಸಿ ಪೂರ್ಣಗೊಳಿಸಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಿ ಆದೇಶಿಸಿದೆ.

1. ಶ್ರೀ ದರ್ಪಣ್ ಜೈನ್, ವಿಶೇಷ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ– ಸದಸ್ಯರು.
2. ಶ್ರೀ ಪಂಕಜ್ ಕುಮಾರ್ ಪಾಂಡೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ–ಸದಸ್ಯರು.

ಸದರಿ ಸಮಿತಿಯು ಒಪ್ಪಂದದ ಕರಡು ಪ್ರತಿಯನ್ನು ಪರಿಶೀಲಿಸಿ, ಪೂರ್ಣಗೊಳಿಸಿ ಶೀಘ್ರವಾಗಿ ವರದಿ ನೀಡಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎನ್. ಯಡ್ರಾವಿ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 389**

## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಇ 22 ಆಂಆಸ 2015, ಬೆಂಗಳೂರು, ದಿನಾಂಕ : 08–05–2015.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಎಸ್‌ವಿಬಿ/09/2015–16, ದಿನಾಂಕ : 13–05–2015.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾದ ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–001–0–01–125 ಆಧುನೀಕರಣ ರಡಿ ರೂ. 15.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ : 01–04–2015 ರಿಂದ 31–03–2016ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2015–16ನೇ ಸಾಲಿನ ಆಯವ್ಯಯದಲ್ಲಿ ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–001–0–01–125 ರಡಿ ಕಲ್ಪಿಸಿರುವ ರೂ. 15.00 ಲಕ್ಷಗಳಲ್ಲಿ 1/3 ಭಾಗದ ಮೊಬಲಗು ರೂ. 5.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. 2015–16ನೇ ಸಾಲಿನ ಮೊದಲನೇ ತ್ರೈಮಾಸಿಕದಲ್ಲಿ 1/4 ಭಾಗ ಅಂದರೆ ರೂ. 3.75 ಲಕ್ಷಗಳನ್ನು ಬಿಡುಗಡೆ ಮಾಡಲು ಅವಕಾಶವಿರುತ್ತದೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 185 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ : 12–06–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015-16ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಲೆಕ್ಕ ಶೀರ್ಷಿಕೆ 2425-00-001-0-01 ನಿರ್ದೇಶನ ಮತ್ತು ಆಡಳಿತ-125-ಆಧುನೀಕರಣ ಯೋಜನೆಯಲ್ಲಿ ಲಭ್ಯವಿರುವ ಅನುದಾನದಲ್ಲಿ ಮೊದಲನೇ ತ್ರೈಮಾಸಿಕದಲ್ಲಿ ರೂ. 3.75 ಲಕ್ಷ (ಮೂರು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 2 ಟಿಎಫ್‌ಪಿ 2015, ದಿನಾಂಕ : 09-04-2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಸಇ 57 ಆಂಆಸ 2015, ದಿನಾಂಕ : 08-06-2015ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R. 390**
**SC-25**

## ಸಹಕಾರ ಸಚಿವಾಲಯ

**ವಿಷಯ :** 2015-16ನೇ ಸಾಲಿಗೆ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶದ ಸಂಖ್ಯೆ : ಸಇ 22 ಆಂಆಸ 2015, ಬೆಂಗಳೂರು, ದಿನಾಂಕ : 08-05-2015.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಬ್ಬಂದಿ/ಇಜಿಪಿ/26/2015-16, ದಿನಾಂಕ : 15-05-2015.
3. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ/02/ಟಿಎಫ್‌ಪಿ, ಬೆಂಗಳೂರು, ದಿನಾಂಕ : 09-04-2015.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2015-16ನೇ ಸಾಲಿನ ಮುಂದುವರೆದ ಯೋಜನೆಯಾಗಿ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425-00-004-0-01-059ರಡಿ ರೂ. 5.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ: 01-04-2015 ರಿಂದ 31-03-2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2015-16ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2425-00-004-0-01-059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಕಲ್ಪಿಸಿರುವ ರೂ. 5.00 ಲಕ್ಷಗಳಲ್ಲಿ 1/3 ಭಾಗದಷ್ಟು ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಯವ್ಯಯದ ಅವಕಾಶದ ಶೇ. 50 ರಷ್ಟು ಅನುದಾನವನ್ನು ತಲಾ ಶೇ. 25 ರಂತೆ 2 ಕಂತುಗಳಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

2015-16ನೇ ಸಾಲಿನ ಮೊದಲನೇ ತ್ರೈಮಾಸಿಕದಲ್ಲಿ 1/4 ಭಾಗ ಅಂದರೆ ರೂ. 1.25 ಲಕ್ಷಗಳನ್ನು ಬಿಡುಗಡೆ ಮಾಡಲು ಅವಕಾಶವಿರುತ್ತದೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ : ಸಿಓ 184 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ : 16-06-2015.

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015-16ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425-00-004-0-01-059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ರೂ. 1.25 ಲಕ್ಷ (ಒಂದು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 2 ಟಿಎಫ್‌ಸಿ 2015, ದಿನಾಂಕ : 09-04-2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಸಇ 62 ಆಂಆಸ 2015, ದಿನಾಂಕ : 15-06-2015ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R. 391**
**SC-25**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಸಹಕಾರ ಸಚಿವಾಲಯ

**ವಿಷಯ :** 2015–16ನೇ ಸಾಲಿಗೆ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶದ ಸಂಖ್ಯೆ : ಸಇ 22 ಆಂಆಸ 2015, ಬೆಂಗಳೂರು, ದಿನಾಂಕ : 08–05–2015,
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಆರ್‌ಡಿ/ಸಿಎಬಿ–1/07/2014–15, ದಿನಾಂಕ : 26–05–2015.
3. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ/02/ಟಿಎಫ್‌ಪಿ, ಬೆಂಗಳೂರು, ದಿನಾಂಕ : 09–04–2015.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾದ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒಟ್ಟು ರೂ. 73741.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ: 01–04–2015 ರಿಂದ 31–03–2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2015–16ನೇ ಸಾಲಿನ ಆಯವ್ಯಯದಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಕಲ್ಪಿಸಿರುವ ರೂ. 73741.00 ಲಕ್ಷಗಳಲ್ಲಿ ರೂ. 18435.25 ಲಕ್ಷಗಳ ಅನುದಾನವನ್ನು ಮೊದಲನೇ ಕಂತನ್ನಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಯವ್ಯಯದ ಅವಕಾಶದ ಶೇ. 50 ರಷ್ಟು ಅನುದಾನವನ್ನು ತಲಾ ಶೇ. 25 ರಂತೆ 2 ಕಂತುಗಳಲ್ಲಿ ಬಿಡುಗಡೆ ಮಾಡಲು ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ನಿಬಂಧಕರ ಪ್ರಸ್ತಾವನೆಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 186 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ : 16–06–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ ಯೋಜನೆಯಲ್ಲಿ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ರಿಯಾಯತಿ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಬಡ್ಡಿ ಸಹಾಯಧನ ರೂ. 18435.25 ಲಕ್ಷ (ಹದಿನೆಂಟು ಸಾವಿರದ ನಾಲ್ಕುನೂರಾ ಮೂವತ್ತೈದು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಗಳನ್ನು 2015–16ನೇ ಸಾಲಿನ ಮೊದಲನೆ ತ್ರೈಮಾಸಿಕದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಲಾಗಿದೆ.

**ಯೋಜನೆ :** ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ.

**ಲೆಕ್ಕಶೀರ್ಷಿಕೆ :** 2425–00–107–2–41.

(ರೂ. ಲಕ್ಷಗಳಲ್ಲಿ)

| | |
|---|---|
| 106–ಸಾಮಾನ್ಯ | 16829.00 |
| 422–ವಿಶೇಷ ಘಟಕ ಯೋಜನೆ | 847.25 |
| 423–ಗಿರಿಜನ ಉಪ ಯೋಜನೆ | 759.00 |
| **ಒಟ್ಟು** | **18435.25** |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 2 ಟಿಎಫ್‌ಸಿ 2015, ದಿನಾಂಕ : 09–04–2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಸಇ 64 ಆಂಆಸ 2015, ದಿನಾಂಕ : 15–06–2015ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R. 392**

**SC-25**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59